| | | |
|---|---|---|
| | | • ಪ್ರಸಕ್ತ ಸಾಲಿನಲ್ಲಿ ಜೇನುಕುರುಬ ಜನಾಂಗದವರಿಗೆ 100 ಮನೆಗಳನ್ನು ಮಂಜೂರು ಮಾಡಿ ಸರ್ಕಾರದ ಪರಿಷ್ಕೃತ ಆದೇಶದಂತೆ ರೂ.4.50 ಲಕ್ಷಗಳಲ್ಲಿ ಮನೆ ನಿರ್ಮಿಸಲು ಕ್ರಮವಹಿಸಲಾಗಿದೆ.<br>• ಉಳಿದಂತೆ ಸದರಿ ತಾಲ್ಲೂಕಿನಲ್ಲಿರುವ ಗಿರಿಜನ ಹಾಡಿಗಳ ಪೈಕಿ ಈ ಕೆಳಕಂಡ 6 ಗಿರಿಜನ ಹಾಡಿಗಳು ಕಾಡಿನ ಒಳಭಾಗದಲ್ಲಿದ್ದು, ಈ ಹಾಡಿಗಳಿಗೆ ಮೂಲಭೂತ ಸೌಕರ್ಯಗಳಾದ ಸಿ.ಸಿ. ರಸ್ತೆ, ಚರಂಡಿ ಕುಡಿಯುವ ನೀರಿನ ಸೌಲಭ್ಯ, ವಿದ್ಯುತ್ ಸಂಪರ್ಕ ಮತ್ತು ಮನೆ ನಿರ್ಮಾಣಗಳನ್ನು ಭಾಗಶಃ ಕಲ್ಪಿಸಲಾಗಿದೆ. ಪೂರ್ಣ ಪ್ರಮಾಣದ ಸೌಲಭ್ಯ ಒದಗಿಸಲು ಅರಣ್ಯ ಇಲಾಖೆಯವರ ಅನುಮತಿ ದೊರೆಯಬೇಕಾಗಿರುತ್ತದೆ.<br>ಅರಣ್ಯದೊಳಗಿರುವ ಹಾಡಿಗಳ ವಿವರ:-<br>1. ಕೋಗಿಲವಾಡಿ ವರ್ತಿ.<br>2. ಹಳ್ಳೆಕೆರೆ.<br>3. ಮಲಗನಕೆರೆ.<br>4. ಕಂಡಿಬೊಕ್ಕೆ.<br>5. ಮರಳಕಟ್ಟೆ ಎ ಕಾಲೋನಿ.<br>6. ಮರಳಕಟ್ಟೆ ಬಿ ಕಾಲೋನಿ. |

**ಸಕಇ 118 ಎಸ್‌ಟಿಪಿ 2020**

(ಗೋವಿಂದ ಎಂ. ಕಾರಜೋಳ),
ಉಪ ಮುಖ್ಯ ಮಂತ್ರಿಗಳು ಹಾಗೂ ಲೋಕೋಪಯೋಗಿ
ಮತ್ತು ಸಮಾಜ ಕಲ್ಯಾಣ ಸಚಿವರು.

**ಕರ್ನಾಟಕ ಸರ್ಕಾರ**

ಸಂಖ್ಯೆ:ಪಸಂಮೀ ಇ-41 ಮೀಇಯೋ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸಸೌಧ,
ಬೆಂಗಳೂರು, ದಿನಾಂಕ: 07-03-2020

ಇವರಿಂದ,
ಸರ್ಕಾರದ ಕಾರ್ಯದರ್ಶಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
ವಿಕಾಸಸೌಧ,
**ಬೆಂಗಳೂರು.**

ಇವರಿಗೆ
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ ಸಚಿವಾಲಯ,
ವಿಧಾನಸೌಧ,
**ಬೆಂಗಳೂರು-1.**

ಮಾನ್ಯರೆ,

ವಿಷಯ:- ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಎಸ್.ಎನ್. ನಾರಾಯಣಸ್ವಾಮಿ ಕೆ.ಎಂ. (ಬಂಗಾರಪೇಟೆ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 513 ಕ್ಕೆ ಉತ್ತರ ಒದಗಿಸುವ ಬಗ್ಗೆ.

******

ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಎಸ್.ಎನ್. ನಾರಾಯಣಸ್ವಾಮಿ ಕೆ.ಎಂ. (ಬಂಗಾರಪೇಟೆ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 513 ಕ್ಕೆ ಸಂಬಂಧಿಸಿದ ಕನ್ನಡ ಭಾಷೆಯ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ

(ಕಾಮಾಕ್ಷಿ ಯು.ಎ.)
ಸರ್ಕಾರದ ಅಧೀನ ಕಾರ್ಯದರ್ಶಿ
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ
(ಮೀನುಗಾರಿಕೆ)

# ಕರ್ನಾಟಕ ವಿಧಾನಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 513

2) ಸದಸ್ಯರ ಹೆಸರು : ಶ್ರೀ ಎಸ್.ಎನ್. ನಾರಾಯಣಸ್ವಾಮಿ ಕೆ.ಎಂ. (ಬಂಗಾರಪೇಟೆ)

3) ಉತ್ತರಿಸುವ ದಿನಾಂಕ : 09-03-2020

4) ಉತ್ತರಿಸಬೇಕಾದ ಸಚಿವರು : ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ 3 ವರ್ಷಗಳಲ್ಲಿ ಬಂಗಾರಪೇಟೆ ವಿಧಾನಸಭಾ ಕ್ಷೇತ್ರದಲ್ಲಿ ಕಳೆದ 20 ವರ್ಷಗಳಿಂದ ಚಾಲ್ತಿಯಲ್ಲಿರುವ ಮೀನುಗಾರಿಕೆ ಸಹಕಾರ ಸಂಘಗಳಿಗೆ ಸಿಬ್ಬಂದಿಗಾಗಿ ಒದಗಿಸಲಾದ ಸಾಲದ ಅನುದಾನದ ಮೊತ್ತವೆಷ್ಟು; (ವಿವರ ಒದಗಿಸುವುದು) | ಕಳೆದ 3 (ಮೂರು) ವರ್ಷಗಳಲ್ಲಿ ಬಂಗಾರಪೇಟೆ ವಿಧಾನಸಭಾ ಕ್ಷೇತ್ರದಲ್ಲಿ ಕಳೆದ 20 ವರ್ಷಗಳಿಂದ ಚಾಲ್ತಿಯಲ್ಲಿರುವ ಮೀನುಗಾರಿಕೆ ಸಹಕಾರ ಸಂಘಗಳಿಗೆ ಸಿಬ್ಬಂದಿಗಾಗಿ ಯಾವುದೇ ಸಾಲದ ಅನುದಾನದ ಮೊತ್ತವನ್ನು ಒದಗಿಸಿರುವುದಿಲ್ಲ. |
| ಆ) | ಸದರಿ ಸೌಲಭ್ಯದಡಿ ಸಾಲ ಪಡೆದ ಫಲಾನುಭವಿಗಳೆಷ್ಟು? (ವಿವರ ನೀಡುವುದು) | ಉದ್ಭವಿಸುವುದಿಲ್ಲ. |

ಸಂಖ್ಯೆ: ಪಸಂಮೀ ಇ-41 ಮೀಇಯೋ 2020

(ಕೋಟ ಶ್ರೀನಿವಾಸ ಪೂಜಾರಿ)
ಮುಜರಾಯಿ, ಮೀನುಗಾರಿಕೆ ಹಾಗೂ
ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಲೋಇ 10 ಸಿಕ್ಯೂಎನ್ 2020(ಇ)

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 06/03/2020

ಇವರಿಂದ,
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ,
ವಿಕಾಸಸೌಧ, ಬೆಂಗಳೂರು.

ಇವರಿಗೆ,
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ, ಬೆಂಗಳೂರು.

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ (ಬೈಲಹೊಂಗಲ), ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 914 ಕ್ಕೆ ಉತ್ತರಿಸುವ ಕುರಿತು.

ಉಲ್ಲೇಖ: ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.914/2020, ದಿನಾಂಕ 27.02.2020

********

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ (ಬೈಲಹೊಂಗಲ), ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 914 ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿದೆ ಹಾಗೂ ಸದರಿ ಉತ್ತರದ soft copy ಅನ್ನು dsqb-kla-kar@nic.in ಇ-ಮೇಲ್ ವಿಳಾಸಕ್ಕೆ ಮೇಲ್ ಕಳುಹಿಸಲಾಗಿದೆ ಎಂದು ತಮಗೆ ತಿಳಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಸಿದ್ದಪ್ಪ ಚಂದ್ರಶೇಖರ ಮರ್ತುರ)
ಶಾಖಾಧಿಕಾರಿ
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸಂಪರ್ಕ-1).

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 914 |
| ಸದಸ್ಯರ ಹೆಸರು | : | ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ (ಬೈಲಹೊಂಗಲ) |
| ಉತ್ತರಿಸುವ ದಿನಾಂಕ | : | 09-03-2020 |
| ಉತ್ತರಿಸುವ ಸಚಿವರು | : | ಉಪ ಮುಖ್ಯ ಮಂತ್ರಿಗಳು, ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಇಲಾಖೆ |

| ಕ್ರ.ಸಂ | ಪ್ರಶ್ನೆ | ಉತ್ತರಗಳು |
|---|---|---|
| ಅ) | ಸವದತ್ತಿ ತಾಲ್ಲೂಕಿನ ಬೈಲಹೊಂಗಲ ಮತಕ್ಷೇತ್ರದಲ್ಲಿ ಬರುವ ಹಲಕಿ ಕ್ರಾಸ್‌ನಿಂದ ಮಲ್ಲೂರ ಕ್ರಾಸ್‌ವರೆಗಿನ ರಸ್ತೆಯು ಅತಿವೃಷ್ಟಿಯಿಂದ ಸಂಪೂರ್ಣವಾಗಿ ಹಾಳಾಗಿ, ಸಾರ್ವಜನಿಕರಿಗೆ ತೊಂದರೆಯುಂಟಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ) | ಬಂದಿದ್ದಲ್ಲಿ, ಸದರಿ ರಸ್ತೆಯನ್ನು ಸಂಪೂರ್ಣವಾಗಿ ಅಭಿವೃದ್ಧಿಪಡಿಸಲು ಸರ್ಕಾರ ಕೈಗೊಳ್ಳಲಾಗಿರುವ ಕ್ರಮವೇನು? (ವಿವರ ನೀಡುವುದು) | ಬೆಳಗಾವಿ ಜಿಲ್ಲೆಯ ಸವದತ್ತಿ ತಾಲ್ಲೂಕಿನ ಬೈಲಹೊಂಗಲ ಮತಕ್ಷೇತ್ರದಲ್ಲಿ ಬರುವ ಹಲಕಿ ಕ್ರಾಸ್‌ನಿಂದ ಮಲ್ಲೂರ ಕ್ರಾಸ್‌ವರೆಗಿನ ರಸ್ತೆಯು ಗೋಕಾಕ ಸವದತ್ತಿ ರಾಜ್ಯ ಹೆದ್ದಾರಿ-103ರ ಭಾಗವಾಗಿರುತ್ತದೆ. ಸದರಿ ರಸ್ತೆಯನ್ನು ಸಂಪೂರ್ಣವಾಗಿ ಅಭಿವೃದ್ಧಿಪಡಿಸಲು ಈಗಾಗಲೇ SHDP-IV ರ ಹಂತದಲ್ಲಿ ಪ್ಯಾಕೇಜ 408A ರಲ್ಲಿ ಕಿಮೀ 24.49 ರಿಂದ 49.80 ರವರೆಗೆ ಸುಧಾರಣೆ ಮಾಡುವ ಕಾಮಗಾರಿಯ ರೂ. 3201.54 ಲಕ್ಷಗಳಿಗೆ ಮಂಜೂರಾಗಿತ್ತು. ಆದರೆ ಕಿಮೀ 24.49 ರಿಂದ 39.00 (ಹಲಕಿ ಕ್ರಾಸ್‌ದಿಂದ ಮಲ್ಲೂರ ಕ್ರಾಸ್‌ವರೆಗೆ) ರಸ್ತೆಯ ಬದಲಾಗಿ ಇದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಹಾಳಾದ ಕಿಮೀ 39.00 ರಿಂದ 48.90 ಹಾಗೂ 69.70 ರಿಂದ 82.70 ರವರೆಗೆ ಎಸ್‌ಎಚ್‌ಡಿಪಿ ಅಧಿಕಾರಿಗಳು ಪರಿವೀಕ್ಷಿಸಿ ಅನುಮೋದಿಸಿದಂತೆ ಬದಲೀ ಚೈನೇಜ್‌ಗಳಲ್ಲಿ ಅಭಿವೃದ್ಧಿಪಡಿಸಲಾಗುತ್ತಿದೆ. |

ಲೋಇ 10 ಸಿಕ್ಯೂಎನ್ 2020(ಇ)

(ಗೋವಿಂದ ಎಂ.ಕಾರಜೋಳ)
ಉಪ ಮುಖ್ಯ ಮಂತ್ರಿಗಳು,
ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಇಲಾಖೆ

# ಕರ್ನಾಟಕ ಸರ್ಕಾರ

ಸಂಖ್ಯೆ:ಪಸಂಮೀ ಇ-43 ಮೀಇಯೋ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸಸೌಧ,
ಬೆಂಗಳೂರು, ದಿನಾಂಕ: 07-03-2020

111
U/S
09/03/2020

ಇವರಿಂದ,
ಸರ್ಕಾರದ ಕಾರ್ಯದರ್ಶಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
ವಿಕಾಸಸೌಧ,
**ಬೆಂಗಳೂರು.**

ಇವರಿಗೆ
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ ಸಚಿವಾಲಯ,
ವಿಧಾನಸೌಧ,
**ಬೆಂಗಳೂರು-1.**

ಮಾನ್ಯರೆ,

ವಿಷಯ:- ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ರಘುಪತಿ ಭಟ್ ಕೆ. (ಉಡುಪಿ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 920 ಕ್ಕೆ ಉತ್ತರ ಒದಗಿಸುವ ಬಗ್ಗೆ.

******

ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ರಘುಪತಿ ಭಟ್ ಕೆ. (ಉಡುಪಿ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 920 ಕ್ಕೆ ಸಂಬಂಧಿಸಿದ ಕನ್ನಡ ಭಾಷೆಯ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ

Kamakshi U.A. 7/3/2020
(ಕಾಮಾಕ್ಷಿ ಯು.ಎ.)
ಸರ್ಕಾರದ ಅಧೀನ ಕಾರ್ಯದರ್ಶಿ
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ
(ಮೀನುಗಾರಿಕೆ)

# ಕರ್ನಾಟಕ ವಿಧಾನಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 920
2) ಸದಸ್ಯರ ಹೆಸರು : ಶ್ರೀ ರಘುಪತಿ ಭಟ್ ಕೆ. (ಉಡುಪಿ)
3) ಉತ್ತರಿಸುವ ದಿನಾಂಕ : 09-03-2020
4) ಉತ್ತರಿಸಬೇಕಾದ ಸಚಿವರು : ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಉಡುಪಿ ಜಿಲ್ಲೆಯಲ್ಲಿ ಮೀನುಗಾರರಿಗೆ ಮೀನುಗಾರಿಕಾ ಬೋಟ್ ನಡೆಸಲು ಎಷ್ಟು ವರ್ಷಗಳಿಂದ ಸರ್ಕಾರ ತೆರಿಗೆ ವಿನಾಯಿತಿ ನೀಡಲಾಗುತ್ತಿದೆ; | 1984-1985ನೇ ಸಾಲಿನಿಂದ 2014-15ನೇ ಸಾಲಿನವರೆವಿಗೂ ಉಡುಪಿ ಜಿಲ್ಲೆಯಲ್ಲಿ ಮೀನುಗಾರಿಕೆ ದೋಣಿಗಳಿಗೆ ರಾಜ್ಯ ಮಾರಾಟ ಕರರಹಿತ ಡೀಸೆಲ್ ಅನ್ನು ನೇರವಾಗಿ ನೀಡಲಾಗುತ್ತಿತ್ತು. 2015-16ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ-79ರಲ್ಲಿ ಘೋಷಣೆಯಾದಂತೆ ಆದೇಶ ಸಂಖ್ಯೆ: ಪಸಂಮೀ/68/ಮೀಇಯೋ/2015(ಭಾ-2), ದಿನಾಂಕ: 04.08.2015 ರಂತೆ 2015-16ನೇ ಸಾಲಿನಿಂದ ಸದರಿ ಯೋಜನೆಯನ್ನು ಮಾರ್ಪಡಿಸಿ "ಮೀನುಗಾರಿಕಾ ದೋಣಿಗಳು ಬಳಸುವ ಡೀಸೆಲ್ ಮೇಲಿನ ಮಾರಾಟ ತೆರಿಗೆ ಮರುಪಾವತಿ" ಯೋಜನೆಯನ್ನು ಜಾರಿಗೆ ತರಲಾಗಿದೆ. |
| ಆ) | ತೆರಿಗೆ ವಿನಾಯಿತಿ ನೀಡುತ್ತಿದ್ದಲ್ಲಿ ಕೈಗಾರಿಕ ಕ್ಷೇತ್ರಕ್ಕೆ ನೀಡಿದಂತೆ ಈ ಹಿಂದೆ 2017 ರಿಂದ ಡೆಲಿವರಿ ಪಾಯಿಂಟ್ ಪದ್ಧತಿಯಿರುವ ವ್ಯವಸ್ಥೆ ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಇ) | ಹಾಗಿದ್ದಲ್ಲಿ, ಸದರಿ ವ್ಯವಸ್ಥೆಯನ್ನು ಮರು ಜಾರಿಗೆ ತರುವ ಬಗ್ಗೆ ಸರ್ಕಾರದ ನಿಲುವೇನು (ವಿವರ ನೀಡುವುದು)? | ಮೀನುಗಾರಿಕಾ ದೋಣಿಗಳಿಗೆ ಡೀಸೆಲ್ ವಿತರಣೆಯನ್ನು ಪಾರದರ್ಶಕವಾಗಿ ಮಾಡುವ ಉದ್ದೇಶದಿಂದ ಮತ್ತು ಆದೇಶ ಸಂಖ್ಯೆ: ಸಿಆಸುಇ 03 ಯೋಜನೆ 2018, ದಿನಾಂಕ: 18.09.2015 ರಲ್ಲಿ ತಿಳಿಸಿದಂತೆ ಫಲಾನುಭವಿ ಆಧಾರಿತ ಯೋಜನೆಗಳನ್ನು ನೇರ ನಗದು ವರ್ಗಾವಣೆ (ಡಿ.ಬಿ.ಟಿ) ಮುಖಾಂತರ ಅನುಷ್ಠಾನ ಗೊಳಿಸಲಾಗುತ್ತಿದೆ.<br><br>ಡೀಸೆಲ್ ಅನ್ನು ಡೆಲಿವರಿ ಪಾಯಿಂಟ್‌ನಲ್ಲಿ ನೀಡುವುದಕ್ಕೆ ಸಂಬಂಧಿಸಿದಂತೆ ಪ್ರಸ್ತುತ ಇಲಾಖೆ ಅನುಸರಿಸುತ್ತಿರುವ ಡಿ.ಬಿ.ಟಿ. ಪದ್ಧತಿಯನ್ನೆ ಮುಂದುವರೆಸಿಕೊಂಡು ಹೋಗುವುದರಿಂದ ನಿಯಮಾನುಸಾರ ಡೀಸೆಲ್ ಪಡೆದ ದೋಣಿ ಮಾಲೀಕರಿಗೆ ಉತ್ತಮ ರೀತಿಯ ಸೇವೆಯನ್ನು ಸೂಕ್ತ ಸಮಯದಲ್ಲಿ ಪಾರದರ್ಶಕವಾಗಿ ನೀಡಿದಂತಾಗುತ್ತದೆ. |

ಸಂಖ್ಯೆ: ಪಸಂಮೀ ಇ-43 ಮೀಇಯೋ 2020

(ಕೋಟ ಶ್ರೀನಿವಾಸ ಪೂಜಾರಿ)
ಮುಜರಾಯಿ, ಮೀನುಗಾರಿಕೆ ಹಾಗೂ
ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

# ಕರ್ನಾಟಕ ಸರ್ಕಾರ

ಸಂಖ್ಯೆ:ಪಸಂಮೀ ಇ-45 ಮೀಇಯೋ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸಸೌಧ,
ಬೆಂಗಳೂರು, ದಿನಾಂಕ: 07-03-2020

189
U/S
09/03/2020

ಇವರಿಂದ,
ಸರ್ಕಾರದ ಕಾರ್ಯದರ್ಶಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
ವಿಕಾಸಸೌಧ,
**ಬೆಂಗಳೂರು.**

ಇವರಿಗೆ
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ ಸಚಿವಾಲಯ,
ವಿಧಾನಸೌಧ,
**ಬೆಂಗಳೂರು-1.**

ಮಾನ್ಯರೆ,

ವಿಷಯ:- ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ವೇದವ್ಯಾಸ ಕಾಮತ್ ಡಿ. (ಮಂಗಳೂರು ನಗರ ದಕ್ಷಿಣ)ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1011 ಕ್ಕೆ ಉತ್ತರ ಒದಗಿಸುವ ಬಗ್ಗೆ.

******

ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ವೇದವ್ಯಾಸ ಕಾಮತ್ ಡಿ. (ಮಂಗಳೂರು ನಗರ ದಕ್ಷಿಣ)ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1011 ಕ್ಕೆ ಸಂಬಂಧಿಸಿದ ಕನ್ನಡ ಭಾಷೆಯ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ

Kamakshi U.A. 7/3/2020
(ಕಾಮಾಕ್ಷಿ ಯು.ಎ.)
ಸರ್ಕಾರದ ಅಧೀನ ಕಾರ್ಯದರ್ಶಿ
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ
(ಮೀನುಗಾರಿಕೆ)

# ಕರ್ನಾಟಕ ವಿಧಾನಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1011
2) ಸದಸ್ಯರ ಹೆಸರು : ಶ್ರೀ ವೇದವ್ಯಾಸ ಕಾಮತ್ ಡಿ. (ಮಂಗಳೂರು ನಗರ ದಕ್ಷಿಣ)
3) ಉತ್ತರಿಸುವ ದಿನಾಂಕ : 09-03-2020
4) ಉತ್ತರಿಸಬೇಕಾದ ಸಚಿವರು : ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಮೀನುಗಾರಿಕೆ ಅಭಿವೃದ್ಧಿ ನಿಗಮದ ನೌಕರರಿಗೆ ದಿನಾಂಕ: 01-04-2017 ರಿಂದ ಅನ್ವಯವಾಗುವಂತೆ 6ನೇ ಪರಿಷ್ಕೃತ ವೇತನ ಶ್ರೇಣಿಯನ್ನು ದಿನಾಂಕ: 01-04-2014 ರಿಂದ ಜಾರಿಗೊಳಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಮೀನುಗಾರಿಕೆ ಅಭಿವೃದ್ಧಿ ನಿಗಮದ ನೌಕರರಿಗೆ ದಿನಾಂಕ: 01-04-2017 ರಿಂದ ಅನ್ವಯವಾಗುವಂತೆ 6ನೇ ಪರಿಷ್ಕೃತ ವೇತನ ಶ್ರೇಣಿಯನ್ನು ದಿನಾಂಕ: 01-04-2014 ರಿಂದ ಜಾರಿಗೊಳಿಸಿರುವುದಿಲ್ಲ.<br><br>ಆದರೆ, ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 7 ಎಸ್‌ಆರ್ ಪಿ 2012 ದಿನಾಂಕ: 21-04-2012 ರಂತೆ ರಾಜ್ಯ ಸರಕಾರವು 5ನೇ ಪರಿಷ್ಕೃತ ವೇತನ ಶ್ರೇಣಿಯನ್ನು ದಿನಾಂಕ: 01-04-2012 ರಿಂದ ಜಾರಿಗೊಳಿಸಿದ್ದು, ಸದರಿ ಪರಿಷ್ಕೃತ ವೇತನ ಶ್ರೇಣಿಯನ್ನು ಕರ್ನಾಟಕ ಮೀನುಗಾರಿಕೆ ಅಭಿವೃದ್ಧಿ ನಿಗಮದ ನೌಕರರಿಗೆ ದಿನಾಂಕ: 01-04-2014 ರಿಂದ ಜಾರಿಗೊಳಿಸಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ) | ಬಂದಿದ್ದಲ್ಲಿ, ಪರಿಷ್ಕೃತ ವೇತನವನ್ನು ಜಾರಿಗೊಳಿಸದೇ ಇರಲು ಕಾರಣವೇನು; | ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 7 ಎಸ್‌ಆರ್ ಪಿ 2012 ದಿನಾಂಕ: 21-04-2012 ರಂತೆ ರಾಜ್ಯ ಸರ್ಕಾರವು 5ನೇ ಪರಿಷ್ಕೃತ ವೇತನ ಶ್ರೇಣಿಯನ್ನು ದಿನಾಂಕ: 01-04-2012 ರಿಂದ ಅನ್ವಯಿಸುವಂತೆ ರಾಜ್ಯ ಸರ್ಕಾರಿ ನೌಕರರಿಗೆ ಮಂಜೂರು ಮಾಡಿರುತ್ತದೆ. ಆದರೆ ಕರ್ನಾಟಕ ಮೀನುಗಾರಿಕೆ ಅಭಿವೃದ್ಧಿ ನಿಗಮವು ಸ್ವಾಯತ್ತ ಸಂಸ್ಥೆಯಾಗಿರುವುದರಿಂದ ದಿನಾಂಕ 13-06-2014 ರಂದು ನಡೆದ ನಿಗಮದ 213ನೇ ಆಡಳಿತ ಮಂಡಳಿ ಸಭೆಯ ನಿರ್ಣಯದಂತೆ ನಿಗಮದ ಆರ್ಥಿಕ ಪರಿಸ್ಥಿತಿಯನ್ನು ಗಣನೆಗೆ ತೆಗೆದುಕೊಂಡು, ನಿಗಮದ ನೌಕರರಿಗೆ ದಿನಾಂಕ 01-04-2014 ರಿಂದ ಅನ್ವಯ ವಾಗುವಂತೆ ಪರಿಷ್ಕೃತ ವೇತನ ಮಂಜೂರು ಮಾಡಿರುತ್ತದೆ. ನಂತರ ದಿನಾಂಕ 31-10-2019 ರಂದು ಜರುಗಿದ ನಿಗಮದ 240ನೇ ಆಡಳಿತ ಮಂಡಳಿ ಸಭೆಯಲ್ಲಿ ನಿಗಮದ ನೌಕರರಿಗೆ ದಿನಾಂಕ: 01-04-2012 ರಿಂದ 31-03-2014ವರೆಗೆ ಮಂಜೂರಾಗಲು ಬಾಕಿ ಇದ್ದ 5ನೇ ಪರಿಷ್ಕೃತ ವೇತನ ಶ್ರೇಣಿಯನ್ನು ಮಂಜೂರು ಮಾಡಿದ್ದು, ಸದರಿ ಪರಿಷ್ಕೃತ ವೇತನ ಶ್ರೇಣಿಯ ವ್ಯತ್ಯಾಸದ ಮೊಬಲಗನ್ನು ಪಾವತಿಸಲಾಗಿದೆ. |

| | | |
|---|---|---|
| ಇ) | ಇದರಿಂದ ನಿವೃತ್ತಿ ಹೊಂದಿದ ಒಟ್ಟು 107 ನೌಕರರಿಗೆ ವೇತನ ಪರಿಷ್ಕರಣೆಯ ಸೌಲಭ್ಯ ನೀಡದೇ ಇರಲು ಕಾರಣವೇನು; | ದಿನಾಂಕ: 31-10-2019 ರಂದು ಜರುಗಿದ ನಿಗಮದ 240ನೇ ಆಡಳಿತ ಮಂಡಳಿ ಸಭೆಯ ನಿರ್ಣಯದಂತೆ ನಿಗಮದ ವೇತನ ಶ್ರೇಣಿಗಳ ಪರಿಷ್ಕರಣೆ ಸೌಲಭ್ಯಗಳನ್ನು ನಿವೃತ್ತಿ ಹೊಂದಿರುವ 107 ನೌಕರರಿಗೆ ಈಗಾಗಲೇ ಪಾವತಿಸಲಾಗಿದೆ. |
| ಈ) | ನಿಗಮವು ಲಾಭದಾಯಕವಾಗಿ ನಡೆಯುತ್ತಿದ್ದರೂ 107 ನೌಕರರಿಗೆ ಗ್ರಾಚ್ಯುಟಿ ಮತ್ತು ಗಳಿಕೆ ರಜೆ ನಗದೀಕರಣದ ವ್ಯತ್ಯಾಸದ ಮೊತ್ತವನ್ನು ಪಾವತಿಸದಿರಲು ಕಾರಣವೇನು (ವಿವರ ನೀಡುವುದು)? | ದಿನಾಂಕ 31-10-2019 ರಂದು ಜರುಗಿದ ನಿಗಮದ 240ನೇ ಆಡಳಿತ ಮಂಡಳಿ ಸಭೆಯ ನಿರ್ಣಯದಂತೆ ನಿಗಮದ ವೇತನ ಶ್ರೇಣಿಗಳ ಪರಿಷ್ಕರಣೆ ಸೌಲಭ್ಯಗಳನ್ನು ನಿವೃತ್ತಿ ಹೊಂದಿರುವ ನೌಕರರಿಗೆ ಈಗಾಗಲೇ ಪಾವತಿಸಲಾಗಿದೆ ಹಾಗೂ ಸದ್ರಿ ಅವಧಿಯಲ್ಲಿ ನಿವೃತ್ತಿ ಹೊಂದಿರುವ ನೌಕರರಿಗೆ ಗ್ರಾಚ್ಯುಟಿ ಮತ್ತು ಗಳಿಕೆ ರಜೆ ನಗದೀಕರಣದ ವ್ಯತ್ಯಾಸದ ಮೊತ್ತವನ್ನು ಕೂಡಾ ಪಾವತಿಸಲಾಗಿದೆ. |

ಸಂಖ್ಯೆ: ಪಸಂಮೀ ಇ-45 ಮೀಇಯೋ 2020

(ಕೋಟ ಶ್ರೀನಿವಾಸ ಪೂಜಾರಿ)
ಮುಜರಾಯಿ, ಮೀನುಗಾರಿಕೆ ಹಾಗೂ
ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

# ಕರ್ನಾಟಕ ವಿಧಾನಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1011
2) ಸದಸ್ಯರ ಹೆಸರು : ಶ್ರೀ ವೇದವ್ಯಾಸ ಕಾಮತ್ ಡಿ. (ಮಂಗಳೂರು ನಗರ ದಕ್ಷಿಣ)
3) ಉತ್ತರಿಸುವ ದಿನಾಂಕ : 09-03-2020
4) ಉತ್ತರಿಸಬೇಕಾದ ಸಚಿವರು : ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಮೀನುಗಾರಿಕೆ ಅಭಿವೃದ್ಧಿ ನಿಗಮದ ನೌಕರರಿಗೆ ದಿನಾಂಕ: 01-04-2017 ರಿಂದ ಅನ್ವಯವಾಗುವಂತೆ 6ನೇ ಪರಿಷ್ಕೃತ ವೇತನ ಶ್ರೇಣಿಯನ್ನು ದಿನಾಂಕ: 01-04-2014 ರಿಂದ ಜಾರಿಗೊಳಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಮೀನುಗಾರಿಕೆ ಅಭಿವೃದ್ಧಿ ನಿಗಮದ ನೌಕರರಿಗೆ ದಿನಾಂಕ: 01-04-2017 ರಿಂದ ಅನ್ವಯವಾಗುವಂತೆ 6ನೇ ಪರಿಷ್ಕೃತ ವೇತನ ಶ್ರೇಣಿಯನ್ನು ದಿನಾಂಕ: 01-04-2014 ರಿಂದ ಜಾರಿಗೊಳಿಸಿರುವುದಿಲ್ಲ.<br><br>ಆದರೆ, ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 7 ಎಸ್‌ಆರ್ ಪಿ 2012 ದಿನಾಂಕ: 21-04-2012 ರಂತೆ ರಾಜ್ಯ ಸರಕಾರವು 5ನೇ ಪರಿಷ್ಕೃತ ವೇತನ ಶ್ರೇಣಿಯನ್ನು ದಿನಾಂಕ: 01-04-2012 ರಿಂದ ಜಾರಿಗೊಳಿಸಿದ್ದು, ಸದರಿ ಪರಿಷ್ಕೃತ ವೇತನ ಶ್ರೇಣಿಯನ್ನು ಕರ್ನಾಟಕ ಮೀನುಗಾರಿಕೆ ಅಭಿವೃದ್ಧಿ ನಿಗಮದ ನೌಕರರಿಗೆ ದಿನಾಂಕ: 01-04-2014 ರಿಂದ ಜಾರಿಗೊಳಿಸಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ) | ಬಂದಿದ್ದಲ್ಲಿ, ಪರಿಷ್ಕೃತ ವೇತನವನ್ನು ಜಾರಿಗೊಳಿಸದೇ ಇರಲು ಕಾರಣವೇನು; | ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 7 ಎಸ್‌ಆರ್ ಪಿ 2012 ದಿನಾಂಕ: 21-04-2012 ರಂತೆ ರಾಜ್ಯ ಸರ್ಕಾರವು 5ನೇ ಪರಿಷ್ಕೃತ ವೇತನ ಶ್ರೇಣಿಯನ್ನು ದಿನಾಂಕ: 01-04-2012 ರಿಂದ ಅನ್ವಯಿಸುವಂತೆ ರಾಜ್ಯ ಸರ್ಕಾರಿ ನೌಕರರಿಗೆ ಮಂಜೂರು ಮಾಡಿರುತ್ತದೆ. ಆದರೆ ಕರ್ನಾಟಕ ಮೀನುಗಾರಿಕೆ ಅಭಿವೃದ್ಧಿ ನಿಗಮವು ಸ್ವಾಯತ್ತ ಸಂಸ್ಥೆಯಾಗಿರುವುದರಿಂದ ದಿನಾಂಕ 13-06-2014 ರಂದು ನಡೆದ ನಿಗಮದ 213ನೇ ಆಡಳಿತ ಮಂಡಳಿ ಸಭೆಯ ನಿರ್ಣಯದಂತೆ ನಿಗಮದ ಆರ್ಥಿಕ ಪರಿಸ್ಥಿತಿಯನ್ನು ಗಣನೆಗೆ ತೆಗೆದುಕೊಂಡು, ನಿಗಮದ ನೌಕರರಿಗೆ ದಿನಾಂಕ 01-04-2014 ರಿಂದ ಅನ್ವಯ ವಾಗುವಂತೆ ಪರಿಷ್ಕೃತ ವೇತನ ಮಂಜೂರು ಮಾಡಿರುತ್ತದೆ. ನಂತರ ದಿನಾಂಕ 31-10-2019 ರಂದು ಜರುಗಿದ ನಿಗಮದ 240ನೇ ಆಡಳಿತ ಮಂಡಳಿ ಸಭೆಯಲ್ಲಿ ನಿಗಮದ ನೌಕರರಿಗೆ ದಿನಾಂಕ: 01-04-2012 ರಿಂದ 31-03-2014ವರೆಗೆ ಮಂಜೂರಾಗಲು ಬಾಕಿ ಇದ್ದ 5ನೇ ಪರಿಷ್ಕೃತ ವೇತನ ಶ್ರೇಣಿಯನ್ನು ಮಂಜೂರು ಮಾಡಿದ್ದು, ಸದರಿ ಪರಿಷ್ಕೃತ ವೇತನ ಶ್ರೇಣಿಯ ವ್ಯತ್ಯಾಸದ ಮೊಬಲಗನ್ನು ಪಾವತಿಸಲಾಗಿದೆ. |

| ಇ) | ಇದರಿಂದ ನಿವೃತ್ತಿ ಹೊಂದಿದ ಒಟ್ಟು 107 ನೌಕರರಿಗೆ ವೇತನ ಪರಿಷ್ಕರಣೆಯ ಸೌಲಭ್ಯ ನೀಡದೇ ಇರಲು ಕಾರಣವೇನು; | ದಿನಾಂಕ: 31-10-2019 ರಂದು ಜರುಗಿದ ನಿಗಮದ 240ನೇ ಆಡಳಿತ ಮಂಡಳಿ ಸಭೆಯ ನಿರ್ಣಯದಂತೆ ನಿಗಮದ ವೇತನ ಶ್ರೇಣಿಗಳ ಪರಿಷ್ಕರಣೆ ಸೌಲಭ್ಯ ಗಳನ್ನು ನಿವೃತ್ತಿ ಹೊಂದಿರುವ 107 ನೌಕರರಿಗೆ ಈಗಾಗಲೇ ಪಾವತಿಸಲಾಗಿದೆ. |
|---|---|---|
| ಈ) | ನಿಗಮವು ಲಾಭದಾಯಕವಾಗಿ ನಡೆಯುತ್ತಿದ್ದರೂ 107 ನೌಕರರಿಗೆ ಗ್ರಾಚ್ಯುಟಿ ಮತ್ತು ಗಳಿಕೆ ರಜೆ ನಗದೀಕರಣದ ವ್ಯತ್ಯಾಸದ ಮೊತ್ತವನ್ನು ಪಾವತಿಸದಿರಲು ಕಾರಣವೇನು (ವಿವರ ನೀಡುವುದು)? | ದಿನಾಂಕ 31-10-2019 ರಂದು ಜರುಗಿದ ನಿಗಮದ 240ನೇ ಆಡಳಿತ ಮಂಡಳಿ ಸಭೆಯ ನಿರ್ಣಯದಂತೆ ನಿಗಮದ ವೇತನ ಶ್ರೇಣಿಗಳ ಪರಿಷ್ಕರಣೆ ಸೌಲಭ್ಯಗಳನ್ನು ನಿವೃತ್ತಿ ಹೊಂದಿರುವ ನೌಕರರಿಗೆ ಈಗಾಗಲೇ ಪಾವತಿಸಲಾಗಿದೆ ಹಾಗೂ ಸದ್ರಿ ಅವಧಿಯಲ್ಲಿ ನಿವೃತ್ತಿ ಹೊಂದಿರುವ ನೌಕರರಿಗೆ ಗ್ರಾಚ್ಯುಟಿ ಮತ್ತು ಗಳಿಕೆ ರಜೆ ನಗದೀಕರಣದ ವ್ಯತ್ಯಾಸದ ಮೊತ್ತವನ್ನು ಕೂಡಾ ಪಾವತಿಸಲಾಗಿದೆ. |

ಸಂಖ್ಯೆ: ಪಸಂಮೀ ಇ-48 ಮೀಇಯೋ 2020

(ಕೋಟ ಶ್ರೀನಿವಾಸ ಪೂಜಾರಿ)
ಮುಜರಾಯಿ, ಮೀನುಗಾರಿಕೆ ಹಾಗೂ
ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

# ಕರ್ನಾಟಕ ಸರ್ಕಾರ

ಸಂಖ್ಯೆ:ಪಸಂಮೀ ಇ-39 ಮೀಇಯೋ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸಸೌಧ,
ಬೆಂಗಳೂರು, ದಿನಾಂಕ: 07-03-2020

ಇವರಿಂದ,
ಸರ್ಕಾರದ ಕಾರ್ಯದರ್ಶಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
ವಿಕಾಸಸೌಧ,
**ಬೆಂಗಳೂರು.**

184
U/S
07/03/2020

ಇವರಿಗೆ
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ ಸಚಿವಾಲಯ,
ವಿಧಾನಸೌಧ,
**ಬೆಂಗಳೂರು-1.**

ಮಾನ್ಯರೆ,

ವಿಷಯ:- ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 341 ಕ್ಕೆ ಉತ್ತರ ಒದಗಿಸುವ ಬಗ್ಗೆ.

******

ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 341 ಕ್ಕೆ ಸಂಬಂಧಿಸಿದ ಕನ್ನಡ ಭಾಷೆಯ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ

Kamakshi U.A.
(ಕಾಮಾಕ್ಷಿ ಯು.ಎ.) 7/3/2020
ಸರ್ಕಾರದ ಅಧೀನ ಕಾರ್ಯದರ್ಶಿ
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ
(ಮೀನುಗಾರಿಕೆ)

# ಕರ್ನಾಟಕ ವಿಧಾನಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 341
2) ಸದಸ್ಯರ ಹೆಸರು : ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರಿ)
3) ಉತ್ತರಿಸುವ ದಿನಾಂಕ : 09-03-2020
4) ಉತ್ತರಿಸಬೇಕಾದ ಸಚಿವರು : ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಕರಾವಳಿ ಜಿಲ್ಲೆಗಳಲ್ಲಿ ಮೀನುಗಾರಿಕೆಯನ್ನು ಅವಲಂಬಿಸಿರುವ ಕುಟುಂಬಗಳ ಹಿತರಕ್ಷಣೆಗಾಗಿ ಅನುಷ್ಠಾನಗೊಳಿಸುತ್ತಿರುವ ಯೋಜನಾನುಷ್ಠಾನಗಳಾವುವು; (ವಿವರ ನೀಡುವುದು) | ಕರಾವಳಿ ಜಿಲ್ಲೆಗಳಲ್ಲಿ ಮೀನುಗಾರಿಕೆಯನ್ನು ಅವಲಂಬಿಸಿರುವ ಕುಟುಂಬಗಳ ಹಿತರಕ್ಷಣೆಗಾಗಿ ಹಲವು ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಅವುಗಳ ವಿವರಗಳನ್ನು **<u>ಅನುಬಂಧ</u>**-1 ರಲ್ಲಿ ಒದಗಿಸಲಾಗಿದೆ. |
| ಆ) | ವೃತ್ತಿ ನಿರತ ಮೀನುಗಾರರಿಗೆ ಆಧುನಿಕ ಮೀನುಗಾರಿಕಾ ತಂತ್ರಜ್ಞಾನ ಮತ್ತು ಮೀನುಗಾರಿಕೆ ಕೌಶಲ್ಯಾಭಿವೃದ್ಧಿಗಾಗಿ ಪರಿಣಾಮಕಾರಿಯಾದ ಕಾರ್ಯಕ್ರಮಗಳು ಯಾವುವು; (ವಿವರ ನೀಡುವುದು) | ಮೀನುಗಾರಿಕೆ ಇಲಾಖೆಯಲ್ಲಿ ಒಟ್ಟು 04 ಮೀನುಗಾರಿಕೆ ತರಬೇತಿ ಕೇಂದ್ರಗಳು ಕಾರ್ಯ ನಿರ್ವಹಿಸುತ್ತಿವೆ. ಸದರಿ ತರಬೇತಿ ಕೇಂದ್ರಗಳಲ್ಲಿ ಆಸಕ್ತ ಕೃಷಿಕರಿಗೆ ಹಾಗೂ ಮೀನುಗಾರರಿಗೆ ವಿವಿಧ ಆಧುನಿಕ ಮೀನುಗಾರಿಕಾ ತಂತ್ರಜ್ಞಾನ ಮತ್ತು ಮೀನುಗಾರಿಕೆ ಕೌಶಲ್ಯಾಭಿವೃದ್ಧಿಗಾಗಿ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ. ತರಬೇತಿ ವಿವರಗಳನ್ನು **<u>ಅನುಬಂಧ</u>**-2ರಲ್ಲಿ ಒದಗಿಸಲಾಗಿದೆ.<br><br>ಹಾಗೆಯೇ, ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಏರ್ಪಡಿಸಲಾಗುವ ಮತ್ಸ್ಯಮೇಳ ಹಾಗೂ ಕೃಷಿ ಮೇಳ ಕಾರ್ಯಕ್ರಮಗಳಲ್ಲಿ ಮೀನುಗಾರಿಕೆ ಕುರಿತ ನೂತನ ತಂತ್ರಜ್ಞಾನದ ಮಾಹಿತಿಗಳನ್ನು ಹಾಗೂ ಪ್ರದರ್ಶನಗಳನ್ನು ಆಯೋಜಿಸಲಾಗುತ್ತಿದೆ.<br><br>ಮುಂದುವರೆದು, ಮೀನು ಕೃಷಿಕರ ದಿನಾಚರಣೆ ಅಂಗವಾಗಿ ರಾಜ್ಯದ ಎಲ್ಲಾ ತಾಲ್ಲೂಕುಗಳಲ್ಲಿ ಮೀನು ಕೃಷಿ ತಾಂತ್ರಿಕತೆ ಕುರಿತು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ. |

| | | |
|---|---|---|
| ಇ) | ಸದರಿ ಜಿಲ್ಲೆಗಳಲ್ಲಿ ಆಧುನಿಕ ಮೀನು ಮಾರಾಟ ಕೇಂದ್ರುಗಳ ಸಂಖ್ಯೆ ಎಷ್ಟು; | ಕರಾವಳಿ ಜಿಲ್ಲೆಗಳಲ್ಲಿ 28 ಆಧುನಿಕ ಮೀನು ಮಾರಾಟ ಕೇಂದ್ರುಗಳಿರುತ್ತವೆ. |
| ಈ) | ಮೂಡಬಿದ್ರೆ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಹಳೆಯಂಗಡಿ ಮೀನು ಮಾರುಕಟ್ಟೆಯನ್ನು ಆಧುನಿಕ ರೀತ್ಯಾ ವ್ಯವಸ್ಥೆಗೊಳಿಸುವ ಕುರಿತು ಸರ್ಕಾರದ ಕ್ರಮಗಳೇನು? (ವಿವರ ನೀಡುವುದು) | ಮೂಡಬಿದ್ರೆ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಹಳೆಯಂಗಡಿ ಮೀನು ಮಾರುಕಟ್ಟೆಯನ್ನು ಆಧುನಿಕ ರೀತ್ಯಾ ವ್ಯವಸ್ಥೆಗೊಳಿಸುವ ಕುರಿತು ಬೇಡಿಕೆ ಇದ್ದು, ಈ ಕುರಿತು ಪರಿಶೀಲಿಸಲಾಗುತ್ತಿದೆ. |

ಸಂಖ್ಯೆ: ಪಸಂಮೀ ಇ-39 ಮೀಇಯೋ 2020

(ಕೋಟ ಶ್ರೀನಿವಾಸ ಪೂಜಾರಿ)
ಮುಜರಾಯಿ, ಮೀನುಗಾರಿಕೆ ಹಾಗೂ
ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 341ರ

## ಅನುಬಂಧ– 1

### 2019–20ನೇ ಸಾಲಿನಲ್ಲಿ ಕರಾವಳಿ ಜಿಲ್ಲೆಗಳಲ್ಲಿ ಮೀನುಗಾರಿಕೆಯನ್ನು ಅವಲಂಬಿಸಿರುವ ಕುಟುಂಬಗಳ ಹಿತರಕ್ಷಣೆಗಾಗಿ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳ ವಿವರ (ಫೆಬ್ರವರಿ 2020 ರ ಅಂತ್ಯದವರೆಗೆ)

1. ರಾಜ್ಯದಲ್ಲಿ ಲಭ್ಯವಿರುವ ಒಳನಾಡು ಹಾಗೂ ಹಿನ್ನೀರು ಜಲಸಂಪನ್ಮೂಲಗಳಲ್ಲಿ ಸಿಗಡಿ ಮತ್ತು ಮೀನು ಕೃಷಿಯನ್ನು ಪ್ರೋತ್ಸಾಹಿಸಲು ಪ್ರತಿ ಹೆಕ್ಟೇರ್ ವಿಸ್ತೀರ್ಣಕ್ಕೆ 1 ಲಕ್ಷ ರೂ.ಗಳ ಘಟಕ ವೆಚ್ಚಕ್ಕೆ ಶೇ.50 ರಷ್ಟು ಸಹಾಯಧನ ನೀಡಲಾಗುವುದು. ಪ್ರಸಕ್ತ ಸಾಲಿನಲ್ಲಿ 400 ಘಟಕಗಳಿಗೆ ಸಹಾಯಧನ ನೀಡುವ ಉದ್ದೇಶದಿಂದ 2 ಕೋಟಿ ರೂ.ಗಳನ್ನು ನೀಡಲಾಗಿದೆ. ಇದಕ್ಕಾಗಿ ರೂ.250 ಲಕ್ಷ ಅನುದಾನವನ್ನು ಒದಗಿಸಲಾಗಿದ್ದು ಈವರೆಗೆ ರೂ.135 ಲಕ್ಷ ವೆಚ್ಚ ಮಾಡಲಾಗಿದ್ದು 320 ಫಲಾನುಭವಿಗಳು ಇದರ ಪ್ರಯೋಜನವನ್ನು ಪಡೆದಿರುತ್ತಾರೆ.

2. ನೀಲಿ ಕ್ರಾಂತಿ – ಮೀನುಗಾರಿಕೆ ಸಮಗ್ರ ಅಭಿವೃದ್ಧಿ ಮತ್ತು ನಿರ್ವಹಣೆ (ಕೇಂದ್ರ ಪುರಸ್ಕೃತ ಯೋಜನೆ)

   ಕೇಂದ್ರ ಸರ್ಕಾರದ ನೀಲಿಕ್ರಾಂತಿ ಸಮಗ್ರ ಮೀನುಗಾರಿಕೆ ಅಭಿವೃದ್ಧಿ ಮತ್ತು ನಿರ್ವಹಣೆ ಯೋಜನೆಯಡಿ ಕರಾವಳಿ ಮೀನುಗಾರಿಕೆ, ಮೂಲಭೂತ ಸೌಲಭ್ಯ ಮತ್ತು ಹಿಡುವಳಿ ನಂತರದ ಕಾರ್ಯಾಚರಣೆಗಳ ಅಭಿವೃದ್ಧಿ, ಮೀನುಗಾರರ ಕಲ್ಯಾಣಕ್ಕಾಗಿ ರಾಷ್ಟ್ರೀಯ ಯೋಜನೆ, ಒಳನಾಡು ಮೀನುಗಾರಿಕೆ ಮತ್ತು ಜಲಕೃಷಿ ಅಭಿವೃದ್ಧಿ, ರಾಷ್ಟ್ರೀಯ ಮೀನುಗಾರಿಕೆ ಅಭಿವೃದ್ಧಿ ಮಂಡಳಿ ಮತ್ತು ಅದರ ಚಟುವಟಿಕೆಗಳು ಮತ್ತು ಇತರೆ ಕಾರ್ಯಕ್ರಮಗಳನ್ನು ಕೇಂದ್ರ ಸರ್ಕಾರದ ಶೇ.24 ರಷ್ಟು ನೆರವಿನೊಂದಿಗೆ ಅನುಷ್ಠಾನಗೊಳಿಸಲು ಅವಕಾಶ ಕಲ್ಪಿಸಲಾಗಿದೆ. ಈ ಯೋಜನೆಯಡಿ ರೂ.928.35 ಲಕ್ಷ ವೆಚ್ಚ ಮಾಡಲಾಗಿದೆ.

3. ಸಂಕಷ್ಟ ಪರಿಹಾರ ನಿಧಿಗೆ ಅಂಶದಾನಗಳು (2405–00–103–0–15):

   ಸಂಕಷ್ಟ ಪರಿಹಾರ ನಿಧಿಗೆ ಸರ್ಕಾರದಿಂದ ಮೂಲ ಬಂಡವಾಳ ನೀಡುವ ಸಲುವಾಗಿ ಆಯವ್ಯಯದಲ್ಲಿ ಅವಕಾಶ ಕಲ್ಪಿಸಲಾಗಿದೆ. ಈ ನಿಧಿಯಿಂದ ಮೀನುಗಾರಿಕೆಯಲ್ಲಿ ತೊಡಗಿರುವಾಗ ನೈಸರ್ಗಿಕ ವಿಕೋಪಗಳಿಂದ ಮರಣ ಹೊಂದಿದ ಮೀನುಗಾರರ ಅವಲಂಬಿತರಿಗೆ ಹಾಗೂ ಶಾಶ್ವತ ಅಂಗವಿಕಲರಾದ ಮೀನುಗಾರರಿಗೆ ರೂ.3.00 ಲಕ್ಷ ಪರಿಹಾರ ಮತ್ತು ಭಾಗಶಃ ಅಂಗವಿಕಲರಾದವರಿಗೆ ರೂ.1.00 ಲಕ್ಷ ಪರಿಹಾರ ನೀಡಲು ಹಾಗೂ ಬಲೆಹಾನಿ, ದೋಣಿಹಾನಿ ಮತ್ತು ವೈದ್ಯಕೀಯ ವೆಚ್ಚಗಳಿಗೆ ಗರಿಷ್ಠ ರೂ.1.00 ಲಕ್ಷ ಮೀನುಗಾರಿಕೆ ಬಂದರು/ ಇಳಿದಾಣ ಕೇಂದ್ರದಲ್ಲಿ ಕೆಲಸದಲ್ಲಿದ್ದಾಗ ಮರಣ ಹೊಂದಿದಲ್ಲಿ ರೂ.1.00 ಲಕ್ಷ, ಸಮುದ್ರದಲ್ಲಿ ಮೀನುಗಾರಿಕೆಗೆ ಹೋದಾಗ ಅನಾರೋಗ್ಯದಿಂದ ಮರಣ ಹೊಂದಿದಲ್ಲಿ ರೂ.2.00 ಲಕ್ಷ ನೆರವು ನೀಡಲು ಅವಕಾಶ ಕಲ್ಪಿಸಲಾಗಿದೆ. ಸಮುದ್ರದಲ್ಲಿ ಮೀನುಗಾರಿಕೆ ಮಾಡುವಾಗ ಪ್ರಕೃತಿ ವಿಕೋಪದಿಂದ ದೋಣಿ ಅವಘಡದಿಂದ ಮೃತರಾದ ಮೀನುಗಾರರ ಕುಟುಂಬದವರಿಗೆ ರೂ 6.00 ಲಕ್ಷ ಪರಿಹಾರ ನೀಡಲಾಗುವುದು. 2019–20ನೇ ಸಾಲಿನಲ್ಲಿ 77 ಮೀನುಗಾರರಿಗೆ/ಮೀನುಗಾರ ಕುಟುಂಬಸ್ಥರಿಗೆ 179.80 ಲಕ್ಷ ಪರಿಹಾರ ವಿತರಿಸಲಾಗಿದೆ.

4. ಸಾಂಪ್ರದಾಯಕ ದೋಣಿಗಳಿಗೆ ಸೀಮೆಎಣ್ಣೆ ಸರಬರಾಜು: ಸಾಂಪ್ರದಾಯಿಕ ದೋಣಿಗಳಿಗೆ ಪಡಿತರ ದರದಲ್ಲಿ 300 ಲೀಟರ್ ಸೀಮೆ ಎಣ್ಣೆಯನ್ನು ಸರಬರಾಜು ಮಾಡಲು ಅವಕಾಶ ಕಲ್ಪಿಸಲಾಗಿದೆ. ಈ ಯೋಜನೆಯಡಿ ರೂ.670.50 ಲಕ್ಷ ವೆಚ್ಚ ಮಾಡಲಾಗಿದ್ದು, 4514 ದೋಣಿಗಳ ಮಾಲೀಕರು ಇದರ ಪ್ರಯೋಜನವನ್ನು ಪಡೆಯುತ್ತಿದ್ದಾರೆ.

5. ಮೀನುಗಾರಿಕೆ ದೋಣಿಗಳಿಗೆ ಡೀಸಲ್ ಮಾರಾಟ ತೆರಿಗೆ ಮರುಪಾವತಿ

   ಯಾಂತ್ರೀಕೃತ ಮೀನುಗಾರಿಕೆ ದೋಣಿಗಳು ಬಳಸುವ ಡೀಸೆಲ್ ಮೇಲಿನ ರಾಜ್ಯ ಮಾರಾಟ ಕರಕ್ಕೆ ಸಮನಾದ ಮೊತ್ತವನ್ನು ಸಹಾಯಧನವಾಗಿ ದೋಣಿಗಳ ಮಾಲೀಕರ ಬ್ಯಾಂಕ್ ಖಾತೆಗೆ ನೇರವಾಗಿ ಬಿಡುಗಡೆ ಮಾಡುವ ಮೂಲಕ ಮರುಪಾವತಿ ಮಾಡುವುದು ಈ ಯೋಜನೆಯ ಉದ್ದೇಶ. ವಾರ್ಷಿಕ ಯಾಂತ್ರೀಕೃತ ಮೀನುಗಾರಿಕೆ ದೋಣಿಗಳಿಗೆ 1,50,000 ಕಿಲೋ

ಲೀಟರ್ ಡೀಸಲ್ ಮೇಲಿನ ಮಾರಾಟ ಕರಕ್ಕೆ ಸಹಾಯಧನ ನೀಡಲಾಗುವುದು. ಇದಕ್ಕಾಗಿ ರೂ. 13,500.00 ಲಕ್ಷ ಅನುದಾನವನ್ನು ಒದಗಿಸಲಾಗಿದ್ದು ಜನವರಿ ಅಂತ್ಯದವರೆಗೆ ರೂ. 10090.38 ವೆಚ್ಚದಲ್ಲಿ 88,984 ಕಿ.ಲೀ. ಡೀಸಲ್‌ನ್ನು 2955 ದೋಣಿಗಳಿಗೆ ವಿತರಿಸಲಾಗಿದೆ.

6. ಮೀನುಗಾರಿಕೆ ಸಲಕರಣೆ ಕಿಟ್ಟುಗಳ ವಿತರಣೆ

a. ಕರಾವಳಿ ಮತ್ತು ಒಳನಾಡಿನಲ್ಲಿ ಸಾಂಪ್ರದಾಯಿಕ ಮೀನುಗಾರರಿಗೆ ಮೀನು ಹಿಡುವಳಿಗೆ ಬೇಕಾದ ಬಲೆ, ಮತ್ತು ಪೂರಕ ಸಾಮಗ್ರಿಗಳನ್ನು ಕಿಟ್ ರೂಪದಲ್ಲಿ ಖರೀದಿಸಲು ಅವಕಾಶ ಮಾಡಲಾಗಿದೆ. ಈ ಯೋಜನೆಯ ಘಟಕ ವೆಚ್ಚ ಗರಿಷ್ಠ ರೂ.10,000 ಗಳಾಗಿದ್ದು, ಶೇ.100 ರಷ್ಟು ಸಹಾಯಧನ ನೀಡಲಾಗುತ್ತಿದೆ.

b. ಮೀನು ಮರಿಗಳನ್ನು ಹಿಡಿಯುವುದನ್ನು ತಪ್ಪಿಸಿ ಮತ್ಸ್ಯ ಸಂಪತ್ತನ್ನು ರಕ್ಷಿಸಲು ಮೀನುಗಾರರಿಗೆ ಕಾಡ್ ಎಂಡ್‌ನಲ್ಲಿ 35 ಎಂಎಂ ಸ್ಕ್ವೇರ್ ಮೆಶ್ ಬಲೆಗಳನ್ನು ಉಚಿತವಾಗಿ ನೀಡಲಾಗುತ್ತಿದೆ. ಈ ಯೋಜನೆಯ ಘಟಕ ವೆಚ್ಚ ಗರಿಷ್ಠ ರೂ.10,000 ಗಳಾಗಿದ್ದು, ಶೇ.100 ರಷ್ಟು ಸಹಾಯಧನ ನೀಡಲಾಗುತ್ತಿದೆ.

ಈ ಕಾರ್ಯಕ್ರಮಗಳಡಿಯಲ್ಲಿ ರೂ.120.10 ಲಕ್ಷ ವೆಚ್ಚ ಮಾಡಲಾಗಿದೆ ಹಾಗೂ 1200 ಮೀನುಗಾರಿಕೆ ಕಿಟ್ಟುಗಳನ್ನು ವಿತರಿಸಲಾಗುತ್ತಿದೆ.

7. ಮಂಜುಗಡ್ಡೆ ಸ್ಥಾವರ ಉಪಯೋಗಿಸುವ ವಿದ್ಯುತ್ ಮೇಲೆ ಸಹಾಯಧನ

ಈ ಯೋಜನೆಯಡಿ ಮಂಜುಗಡ್ಡೆ ಘಟಕಗಳು ಉಪಯೋಗಿಸಿದ ವಿದ್ಯುತ್ ಮೇಲೆ ಪ್ರತಿ ಯೂನಿಟ್‌ಗೆ ರೂ.1.75 ರಂತೆ ಸಹಾಯಧನ ನೀಡಲು ಅವಕಾಶ ಕಲ್ಪಿಸಲಾಗಿದೆ. ಪ್ರತಿ ಘಟಕಕ್ಕೆ ವಾರ್ಷಿಕ ಗರಿಷ್ಠ ರೂ.3.00 ಲಕ್ಷ ಸಹಾಯಧನ ನೀಡಲಾಗುತ್ತಿದೆ. ಇದಕ್ಕಾಗಿ ರೂ. 400.00 ಲಕ್ಷ ಅನುದಾನ ಒದಗಿಸಿದೆ. ಈವರೆಗೆ ರೂ.399.99 ಲಕ್ಷ ವೆಚ್ಚ ಮಾಡಲಾಗಿದ್ದು 133 ಘಟಕಗಳು ಈ ಯೋಜನೆಯ ಪ್ರಯೋಜನವನ್ನು ಪಡೆಯುತ್ತಿವೆ.

8. ಮೀನುಗಾರರ ಕಲ್ಯಾಣ ಯೋಜನೆಗಳು (ಕೇಂದ್ರ ಪುರಸ್ಕೃತ ಯೋಜನೆ)

ಅ) ಕಡಲ ಮೀನುಗಾರರಿಗೆ ಉಳಿತಾಯ ಮತ್ತು ಪರಿಹಾರ ಯೋಜನೆ

ಉಳಿತಾಯ ಹಾಗೂ ಪರಿಹಾರ ಯೋಜನೆಯಡಿ ಕರಾವಳಿ ಮೀನುಗಾರರಿಂದ ರೂ.1500/- ಗಳನ್ನು ಮೀನುಗಾರಿಕೆ ಅವಧಿಯಲ್ಲಿ ವಸೂಲಿ ಮಾಡಿ ಈ ಮೊತ್ತಕ್ಕೆ ಕೇಂದ್ರ ಸರ್ಕಾರ ರೂ.1500/- ಮತ್ತು ರಾಜ್ಯ ಸರ್ಕಾರ ರೂ.1500/- ಸೇರಿಸಿ ಹೀಗೆ ಒಟ್ಟು ರೂ.4500/- ಗಳನ್ನು ಮೀನುಗಾರಿಕೆ ಇಲ್ಲದ 3 ತಿಂಗಳುಗಳಲ್ಲಿ ಪ್ರತಿ ತಿಂಗಳಿಗೆ ರೂ.1500 ರಂತೆ ಪ್ರತಿ ಮೀನುಗಾರರಿಗೆ ನೀಡಲಾಗುತ್ತಿದೆ.

ಆ) ಸಾಮೂಹಿಕ ವಿಮಾ ಯೋಜನೆ

ರಾಜ್ಯದ 2.04 ಲಕ್ಷ ಮೀನುಗಾರರಿಗೆ ಗುಂಪು ವಿಮಾ ಸೌಲಭ್ಯ ಒದಗಿಸಲು ರಾಜ್ಯದ ವಿಮಾ ಕಂತನ್ನು ಪಾವತಿಸಲು ಅನುದಾನ ಒದಗಿಸಲಾಗಿದೆ. ಈ ಯೋಜನೆಯಡಿ ವಿಮಾ ಸೌಲಭ್ಯವನ್ನು ಮೀನುಗಾರಿಕೆಯಲ್ಲಿ ತೊಡಗಿರುವಾಗ ನೈಸರ್ಗಿಕ ವಿಕೋಪಗಳಿಂದ ಮರಣ ಹೊಂದಿದ ಮೀನುಗಾರರ ಅವಲಂಬಿತರಿಗೆ ಹಾಗೂ ಶಾಶ್ವತ ಅಂಗವಿಕಲರಾದ ಮೀನುಗಾರರಿಗೆ ರೂ.200,000/- ಗಳ ಪರಿಹಾರ ಮತ್ತು ಭಾಗಶಃ ಅಂಗವಿಕಲರಾದವರಿಗೆ ರೂ.100,000 ಗಳ ಪರಿಹಾರ ನೀಡಲಾಗುತ್ತಿದೆ. ವಿಮಾ ಕಂತಿನ ಹಣ ಪ್ರತಿ ವರ್ಷ ದೆಹಲಿಯಲ್ಲಿರುವ ಮೀನುಗಾರರ ಸಹಕಾರ ಸಂಘಗಳ ರಾಷ್ಟ್ರೀಯ ಮಂಡಳಿ, ದೆಹಲಿಗೆ ಬಿಡುಗಡೆ ಮಾಡಲಾಗುವುದು. ಈ ಯೋಜನೆಗೆ ರೂ. 13.00 ಲಕ್ಷ ಅನುದಾನ ಒದಗಿಸಿದೆ. ಈವರೆಗೆ ರೂ.12.28 ಲಕ್ಷ ವಿಮಾ ಮೊತ್ತವನ್ನು 2.04 ಲಕ್ಷ ಪಾವತಿಸಲಾಗಿದೆ.

9. ವಾಣಿಜ್ಯ ಬ್ಯಾಂಕುಗಳಿಗೆ ಬಡ್ಡಿ ವ್ಯತ್ಯಾಸವನ್ನು ತುಂಬಿಕೊಡುವುದು

ಮೀನುಗಾರರು ಮೀನುಗಾರಿಕೆ ಚಟುವಟಿಕೆಗಳಿಗೆ ವಾಣಿಜ್ಯ ಬ್ಯಾಂಕುಗಳಿಂದ ಅಲ್ಪಾವಧಿ ಸಾಲ ತೆಗೆದುಕೊಂಡು ಕೈಗೊಳ್ಳಲು ಅನುಕೂಲವಾಗುವಂತೆ ವ್ಯತ್ಯಾಸದ ಬಡ್ಡಿಯನ್ನು ತುಂಬಿಕೊಡಲು ಈ ಯೋಜನೆಯಡಿ ಅವಕಾಶ ಕಲ್ಪಿಸಲಾಗಿದೆ. ಮೀನುಗಾರರು ರೂ.50,000 ಗಳ ವರೆಗೆ ಸಾಲ ಪಡೆಯಲು ಅವಕಾಶವಿರುತ್ತದೆ.

ಮೀನುಗಾರಿಕೆ ಚಟುವಟಿಕೆಗಳನ್ನು ಕೈಗೊಳ್ಳಲು ಮಹಿಳಾ ಮೀನುಗಾರರಿಗೆ 50,000 ರೂ:ಗಳವರೆಗೆ ಶೇ.2ರ ಬಡ್ಡಿ ದರದಲ್ಲಿ ವಾಣಿಜ್ಯ / ಗ್ರಾಮೀಣ ಪ್ರಾದೇಶಿಕ ಬ್ಯಾಂಕ್‌ಗಳಿಂದ ನೀಡುತ್ತಿರುವ ಸಾಲವನ್ನು 2018-19ನೇ ಸಾಲಿನಿಂದ ಶೂನ್ಯ ಬಡ್ಡಿ ದರದಲ್ಲಿ ನೀಡಲು ಪ್ರಸ್ತಾವಿಸಲಾಗಿದೆ. ಇದಕ್ಕಾಗಿ ರೂ. 151.04 ಲಕ್ಷ ಅನುದಾನ ಒದಗಿಸಿದೆ ಹಾಗೂ 13768 ಮೀನುಗಾರರಿಗೆ ರೂ.113.28 ಲಕ್ಷ ಬಡ್ಡಿ ವ್ಯತ್ಯಾಸವನ್ನು ತುಂಬಿಕೊಡಲಾಗಿದೆ.

10. ಮೀನುಗಾರಿಕೆ ಕೂಡು ರಸ್ತೆಗಳ ನಿರ್ವಹಣೆ (2405-00-337-0-01)

ರಾಜ್ಯದ ಕರಾವಳಿಯ ಮೂರು ಜಿಲ್ಲೆಗಳಲ್ಲಿ ಒಟ್ಟು 355.13 ಕಿಮೀ ಉದ್ದದ 218 ಮೀನುಗಾರಿಕೆ ಕೊಂಡಿ ರಸ್ತೆಗಳಿರುತ್ತವೆ. ಮಳೆ ಹಾಗೂ ಮೀನು ಸಾಗಾಣಿಕೆಯಿಂದ ಈ ಮೀನುಗಾರಿಕೆ ಕೊಂಡಿ ರಸ್ತೆಗಳು ಹಾಳಾಗುತ್ತದೆ. ಇವುಗಳ ದುರಸ್ತಿ ಹಾಗೂ ನಿರ್ವಹಣೆಯನ್ನು ಕೈಗೊಳ್ಳಲಾಗುತ್ತಿದೆ. ಈ ಯೋಜನೆಯಡಿಯಲ್ಲಿ 11 ರಸ್ತೆಗಳನ್ನು ರೂ.29.20 ಲಕ್ಷ ವೆಚ್ಚದಲ್ಲಿ ನಿರ್ವಹಿಸಲಾಗುತ್ತಿದೆ.

11. ಸಾಲಮನ್ನಾ ಯೋಜನೆ ಜಾರಿಗೊಳಿಸಲಾಗಿರುತ್ತದೆ. ರಾಜ್ಯದ ಮೀನುಗಾರರು ಶೇ.2ರ ಮತ್ತು ಶೂನ್ಯ ಬಡ್ಡಿದರದಲ್ಲಿ ವಾಣಿಜ್ಯ ಮತ್ತು ಪ್ರಾದೇಶಿಕ ಗ್ರಾಮೀಣ ಬ್ಯಾಂಕ್‌ಗಳಿಂದ 2017-18 ಮತ್ತು 2018-19 ನೇ ಸಾಲುಗಳಲ್ಲಿ 23507 ಫಲಾನುಭವಿಗಳು ಪಡೆದ ರೂ.50,000 ವರೆಗಿನ ಸಾಲ ಮರು ಪಾವತಿಸಲು ಬಾಕಿ ಇರುವ ಒಟ್ಟು ಮೊತ್ತ ರೂ.60.584 ಕೋಟಿ ಗಳನ್ನು ಮನ್ನಾ ಮಾಡಲು ಕ್ರಮವಹಿಸಲಾಗುತ್ತಿದೆ.

13. ಕಿಸಾನ್ ಕ್ರೆಡಿಟ್ ಕಾರ್ಡ್ ಸೌಲಭ್ಯವನ್ನು ರಾಜ್ಯದ ಮೀನುಗಾರರಿಗೂ ವಿಸ್ತರಿಸಲಾಗಿರುತ್ತದೆ. ರಾಜ್ಯದಲ್ಲಿ 9.61 ಲಕ್ಷ ಮೀನುಗಾರರಿದ್ದು ಈ ಪೈಕಿ 2.61 ಲಕ್ಷ ಸಕ್ರಿಯ ಮೀನುಗಾರರಾಗಿರುತ್ತಾರೆ. ರಾಜ್ಯದಲ್ಲಿ ಒಟ್ಟು 654 ಮೀನುಗಾರ ಸಹಕಾರ ಸಂಘಗಳಿರುತ್ತವೆ. ಕೇಂದ್ರ ಸರ್ಕಾರವು 2018-19 ನೇ ಸಾಲಿನ ಬಜೆಟ್‌ನಲ್ಲಿ ಕಿಸಾನ್ ಕ್ರೆಡಿಟ್ ಕಾರ್ಡ್ ಸೌಲಭ್ಯವನ್ನು ಮೀನುಗಾರಿಕೆ ಮತ್ತು ಪಶುಸಂಗೋಪನೆ ಕೃಷಿಕರಿಗೂ ವಿಸ್ತರಿಸಿರುತ್ತದೆ. ಮೀನು ಕೃಷಿ ವಿಭಾಗಕ್ಕೆ ಸಂಬಂಧಿಸಿದಂತೆ ಸಾಲದ ಮಿತಿಯನ್ನು ಗರಿಷ್ಠ ರೂ 2.80 ಲಕ್ಷಗಳಿಗೆ ಹಾಗೂ ಹಿಡುವಳಿ ಮೀನುಗಾರಿಕೆ ವಿಭಾಗದಲ್ಲಿ ಗರಿಷ್ಠ ರೂ 3.30 ಲಕ್ಷಗಳವರೆಗೆ ನಿಗದಿಪಡಿಸಲಾಗಿದೆ. ಈ ಯೋಜನೆಯ ಅನುಷ್ಠಾನ ಕುರಿತಂತೆ 02.01.2020 ರಂದು ತುಮಕೂರಿನಲ್ಲಿ ಸನ್ಮಾನ್ಯ ಪ್ರಧಾನ ಮಂತ್ರಿಗಳು ಸಾಂಕೇತಿಕವಾಗಿ ಕ್ರೆಡಿಟ್ ಕಾರ್ಡ್‌ಗಳನ್ನು ವಿತರಿಸಿರುತ್ತಾರೆ.

ಮಾನ್ಯ ವಿಧಾನಸಭೆ ಸದಸ್ಯರಾದ ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3418

ಅನುಬಂಧ- 2

| ಕ್ರ.ಸಂ. | ತರಬೇತಿ ವಿವರಗಳು | ತರಬೇತಿ ದಿನಗಳು |
|---|---|---|
| 1 | ರಾಷ್ಟ್ರೀಯ ಮೀನುಗಾರಿಕೆ ಅಭಿವೃದ್ಧಿ ಮಂಡಳಿ, ಹೈದರಾಬಾದ್ ಸಂಸ್ಥೆಯ ಪ್ರಾಯೋಜಿತ ಕೌಶಲ್ಯ ಹಾಗೂ ಸಾಮರ್ಥ್ಯ ಅಭಿವೃದ್ಧಿ ತರಬೇತಿ ಕಾರ್ಯಕ್ರಮ | 03 ದಿನಗಳು |
| | ಸುಧಾರಿತ ತಳಿಗಳ ಪ್ರಚುರ ಪಡಿಸುವಿಕೆ ಕಾರ್ಯಾಗಾರ | 01 ದಿನಗಳು |
| 2 | ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ – ಕೌಶಲ್ಯ ಹಾಗೂ ಸಾಮರ್ಥ್ಯ ಅಭಿವೃದ್ಧಿ ತರಬೇತಿ ಕಾರ್ಯಕ್ರಮ | 03 ದಿನಗಳು |
| 3 | ಒಂದು ತಿಂಗಳ ಸನಿವಾಸ ಮೀನುಗಾರಿಕೆ ತರಬೇತಿ | 30 ದಿನಗಳು |
| 4 | ವಿಶೇಷ ಘಟಕ ಯೋಜನೆ ತರಬೇತಿ & ಶೈಕ್ಷಣಿಕ ಪ್ರವಾಸ | 05 ದಿನಗಳು |
| 5 | ಗಿರಿಜನ ಉಪ ಯೋಜನೆ ತರಬೇತಿ & ಶೈಕ್ಷಣಿಕ ಪ್ರವಾಸ | 05 ದಿನಗಳು |
| 6 | ವಿವಿಧ ಯೋಜನೆಗಳಡಿ ಇತರೆ ಮೀನುಗಾರಿಕೆ ಕಛೇರಿಗಳಿಂದ ಮತ್ತು ಇತರೆ ಇಲಾಖೆ ಹಾಗು ಕಾಲೇಜುಗಳಿಂದ ತರಬೇತಿ ಕೇಂದ್ರಕ್ಕೆ ಭೇಟಿ ನೀಡಿ ತರಬೇತಿ ಪಡೆಯಲಾಗುತ್ತದೆ. | 01 ರಿಂದ 15ದಿನಗಳು |

# ಕರ್ನಾಟಕ ಸರ್ಕಾರ

ಸಂಖ್ಯೆ:ಪಸಂಮೀ ಇ-40 ಮೀಇಯೋ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸಸೌಧ,
ಬೆಂಗಳೂರು, ದಿನಾಂಕ: 07-03-2020

ಇವರಿಂದ,
ಸರ್ಕಾರದ ಕಾರ್ಯದರ್ಶಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
ವಿಕಾಸಸೌಧ,
**ಬೆಂಗಳೂರು.**

07
U/S
09/03/2020

ಇವರಿಗೆ
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ ಸಚಿವಾಲಯ,
ವಿಧಾನಸೌಧ,
**ಬೆಂಗಳೂರು-1.**

ಮಾನ್ಯರೆ,

ವಿಷಯ:- ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಅನಿಲ್ ಚಿಕ್ಕಮಾದು (ಹೆಚ್.ಡಿ.ಕೋಟೆ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 352 ಕ್ಕೆ ಉತ್ತರ ಒದಗಿಸುವ ಬಗ್ಗೆ.

******

ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಅನಿಲ್ ಚಿಕ್ಕಮಾದು (ಹೆಚ್.ಡಿ.ಕೋಟೆ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 352 ಕ್ಕೆ ಸಂಬಂಧಿಸಿದ ಕನ್ನಡ ಭಾಷೆಯ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ

Kamakshi U.A. 7/3/2020
(ಕಾಮಾಕ್ಷಿ ಯು.ಎ.)
ಸರ್ಕಾರದ ಅಧೀನ ಕಾರ್ಯದರ್ಶಿ
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ
(ಮೀನುಗಾರಿಕೆ)

# ಕರ್ನಾಟಕ ವಿಧಾನಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 352
2) ಸದಸ್ಯರ ಹೆಸರು : ಶ್ರೀ ಅನಿಲ್ ಚಿಕ್ಕಮಾದು (ಹೆಚ್.ಡಿ.ಕೋಟೆ)
3) ಉತ್ತರಿಸುವ ದಿನಾಂಕ : 09-03-2020
4) ಉತ್ತರಿಸಬೇಕಾದ ಸಚಿವರು : ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಮೀನುಗಾರರ ಸಾಲ ಮನ್ನಾ ಮಾಡುವ ಸಲುವಾಗಿ ಇದುವರೆಗೂ ಫಲಾನುಭವಿಗಳನ್ನು ಗುರುತಿಸಲಾಗಿದೆ; (ತಾಲ್ಲೂಕುವಾರು ಮಾಹಿತಿ ನೀಡುವುದು) | ಮಾಹಿತಿಯನ್ನು **ಅನುಬಂಧ-1** ರಲ್ಲಿ ಒದಗಿಸಲಾಗಿದೆ. |
| ಆ) | ಸದರಿ ಸೌಲಭ್ಯ ಪಡೆಯಲು ಅರ್ಹರಿರುವ ಮೀನುಗಾರರು ಪಡೆದುಕೊಂಡಿರುವ ಒಟ್ಟು ಸಾಲದ ಮೊತ್ತವೆಷ್ಟು; (ತಾಲ್ಲೂಕುವಾರು ವಿವರ ನೀಡುವುದು) | ಮಾಹಿತಿಯನ್ನು **ಅನುಬಂಧ-2** ರಲ್ಲಿ ಒದಗಿಸಲಾಗಿದೆ. |
| ಇ) | ಬಾಕಿ ಇರುವ ಅರ್ಹ ಫಲಾನುಭವಿ ಗಳಿಗೆ ಸದರಿ ಸೌಲಭ್ಯವನ್ನು ಯಾವ ಕಾಲಮಿತಿಯೊಳಗೆ ವಿತರಿಸ ಲಾಗುವುದು? (ತಾಲ್ಲೂಕುವಾರು ವಿವರ ನೀಡುವುದು) | ಲೀಡ್ ಬ್ಯಾಂಕ್ ಮ್ಯಾನೇಜರ್‌ಗಳು ಎಸ್‌ಎಲ್‌ಬಿಸಿ ಪ್ರತಿನಿಧಿಗಳು ಮತ್ತು ಭೂಮಿ ನಿರ್ವಹಣಾ ಕೋಶದ ಪ್ರತಿನಿಧಿ ಗಳೊಂದಿಗೆ ಸಭೆ ನಡೆಸಿದ್ದು, ಕೃಷಿ ಸಾಲ ಮನ್ನಾ ಮಾದರಿಯಲ್ಲಿ ತಂತ್ರಾಂಶವನ್ನು ಅಭಿವೃದ್ಧಿ ಪಡಿಸಲಾಗುತ್ತಿದೆ. ತಂತ್ರಾಂಶವನ್ನು ರೂಪಿಸಿದ ನಂತರ ಬ್ಯಾಂಕ್‌ಗಳಿಂದ ದತ್ತಾಂಶವನ್ನು ಕ್ರೋಢೀಕರಿಸಿ, ಈ ಸೌಲಭ್ಯವನ್ನು ವಿತರಿಸಲಾಗುವುದು. |

ಸಂಖ್ಯೆ: ಪಸಂಮೀ ಇ-40 ಮೀಇಯೋ 2020

(ಕೋಟ ಶ್ರೀನಿವಾಸ ಪೂಜಾರಿ)
ಮುಜರಾಯಿ, ಮೀನುಗಾರಿಕೆ ಹಾಗೂ
ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

ಮಾನ್ಯ ವಿಧಾನಸಭೆ ಸದಸ್ಯರಾದ ಶ್ರೀ ಅನಿಲ್ ಚಿಕ್ಕಮಾದು (ಹೆಚ್.ಡಿ.ಕೋಟೆ)
ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3528 4

ಅನುಬಂಧ-I

| ಕ್ರಮ ಸಂಖ್ಯೆ | ತಾಲ್ಲೂಕಿನ ಹೆಸರು | ಫಲಾನುಭವಿಗಳ ಸಂಖ್ಯೆ |
|---|---|---|
| 1. | ಭಟ್ಕಳ | 16 |
| 2. | ಕಾರವಾರ | 441 |
| 3. | ಮಂಗಳೂರು | 2755 |
| 4. | ಉಡುಪಿ ತಾಲ್ಲೂಕು | 7296 |
| 5. | ಕುಂದಾಪುರ | 13021 |

[illegible]

ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: ೩೫೨೮

ಅನುಬಂಧ-2

(ರೂ.ಕೋಟಿಗಳಲ್ಲಿ)

| ಕ್ರಮ ಸಂಖ್ಯೆ | ತಾಲ್ಲೂಕಿನ ಹೆಸರು | ಫಲಾನುಭವಿಗಳ ಸಂಖ್ಯೆ | ಪಡೆದುಕೊಂಡಿರುವ ಸಾಲದ ಮೊತ್ತ |
|---|---|---|---|
| 1. | ಭಟ್ಕಳ | 16 | 0.05 |
| 2. | ಕಾರವಾರ | 441 | 2.23 |
| 3. | ಮಂಗಳೂರು | 2755 | 2.475 |
| 4. | ಉಡುಪಿ ತಾಲ್ಲೂಕು | 7296 | 50.44 |
| 5. | ಕುಂದಾಪುರ | 13021 | 74.11 |

# ಕರ್ನಾಟಕ ಸರ್ಕಾರ

ಸಂಖ್ಯೆ:ಪಸಂಮೀ ಇ-37 ಮೀಇಯೋ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸಸೌಧ,
ಬೆಂಗಳೂರು, ದಿನಾಂಕ: 07-03-2020

141
9/S
09/03/2020

ಇವರಿಂದ,
ಸರ್ಕಾರದ ಕಾರ್ಯದರ್ಶಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
ವಿಕಾಸಸೌಧ,
**ಬೆಂಗಳೂರು.**

ಇವರಿಗೆ
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ ಸಚಿವಾಲಯ,
ವಿಧಾನಸೌಧ,
**ಬೆಂಗಳೂರು-1.**

ಮಾನ್ಯರೆ,

ವಿಷಯ:- ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಎಸ್.ಎನ್. ನಾರಾಯಣಸ್ವಾಮಿ ಕೆ.ಎಂ. (ಬಂಗಾರಪೇಟೆ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 132 ಕ್ಕೆ ಉತ್ತರ ಒದಗಿಸುವ ಬಗ್ಗೆ.

******

ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಎಸ್.ಎನ್. ನಾರಾಯಣಸ್ವಾಮಿ ಕೆ.ಎಂ. (ಬಂಗಾರಪೇಟೆ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 132 ಕ್ಕೆ ಸಂಬಂಧಿಸಿದ ಕನ್ನಡ ಭಾಷೆಯ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ

Kamakshi U.A. 7/3/2020
(ಕಾಮಾಕ್ಷಿ ಯು.ಎ.)
ಸರ್ಕಾರದ ಅಧೀನ ಕಾರ್ಯದರ್ಶಿ
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ
(ಮೀನುಗಾರಿಕೆ)

# ಕರ್ನಾಟಕ ವಿಧಾನಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 132
2) ಸದಸ್ಯರ ಹೆಸರು : ಶ್ರೀ ಎಸ್.ಎನ್.ನಾರಾಯಣಸ್ವಾಮಿ ಕೆ.ಎಂ. (ಬಂಗಾರಪೇಟೆ)
3) ಉತ್ತರಿಸುವ ದಿನಾಂಕ : 09-03-2020
4) ಉತ್ತರಿಸಬೇಕಾದ ಸಚಿವರು : ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಬಂಗಾರಪೇಟೆ ವಿಧಾನಸಭಾ ಕ್ಷೇತ್ರದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಮೀನುಗಾರರ ಸಹಕಾರ ಸಂಘಗಳೆಷ್ಟು; ಅವುಗಳ ಪೈಕಿ ನೋಂದಣಿ ಆದ ಸಂಘಗಳೆಷ್ಟು; (ಸಂಘಗಳಲ್ಲಿ ಆಯ್ಕೆಯಾಗಿರುವ ಸದಸ್ಯರ ಹೆಸರು, ವಿಳಾಸ ವಿವರ ನೀಡುವುದು) | ಬಂಗಾರಪೇಟೆ ವಿಧಾನಸಭಾ ಕ್ಷೇತ್ರದಲ್ಲಿ 01 ಮೀನುಗಾರರ ಸಹಕಾರ ಸಂಘ ಕಾರ್ಯನಿರ್ವಹಿಸುತ್ತಿದ್ದು, ಸಂಘದ ವಿವರ ಕೆಳಕಂಡಂತಿರುತ್ತದೆ:-<br>(1) ಮೀನುಗಾರರ ಅಭಿವೃದ್ಧಿ ಮತ್ತು ಮಾರಾಟ ಸಹಕಾರ ಸಂಘ (ನಿ) ಪೋಲೇನಹಳ್ಳಿ, ಬಂಗಾರಪೇಟೆ ತಾಲ್ಲೂಕು (ನೋಂದಣಿ ಸಂಖ್ಯೆ: ಸಿಆರ್/33/19799/1992-93, ದಿ: 24-02-1993)<br>ಸಂಘದಲ್ಲಿ ಆಯ್ಕೆಯಾಗಿರುವ ಸದಸ್ಯರ ಹೆಸರು, ವಿಳಾಸ ವಿವರಗಳನ್ನು **ಅನುಬಂಧ-1** ರಲ್ಲಿ ಒದಗಿಸಲಾಗಿದೆ. |
| ಆ) | ಮೀನುಗಾರಿಕೆ ನಡೆಸಲು ಕೆರೆ, ಕುಂಟೆಗಳನ್ನು ಹರಾಜು ಮಾಡಲು ಇರುವ ನಿಯಮಗಳೇನು; (ವಿವರ ನೀಡುವುದು) | ನಿಯಮಾನುಸಾರ ಒಳನಾಡು ಮೀನುಗಾರಿಕೆ ಕಾರ್ಯನೀತಿ 2014ರ ಆದೇಶ ಸಂಖ್ಯೆ: ಪಸಂಮೀ/125/ಮೀಇಇ/2013, ದಿನಾಂಕ: 21-02-2014 ರಂತೆ ಕೆರೆಗಳ ವಿಲೇವಾರಿ ಮಾಡಲಾಗುತ್ತಿದೆ . ಪ್ರತಿಯನ್ನು **ಅನುಬಂಧ-2** ರಲ್ಲಿ ಒದಗಿಸಲಾಗಿದೆ. |
| ಇ) | ಕೆರೆಗಳನ್ನು ಮರುಹರಾಜು ಮಾಡಲು ಅವಕಾಶ ಕಲ್ಪಿಸಲಾಗಿದೆಯೇ; ಇದ್ದಲ್ಲಿ, ಎಷ್ಟು ಬಾರಿ ಮಂಜೂರು ಹರಾಜು ಮಾಡಬಹುದು; (ವಿವರ ನೀಡುವುದು) | ಆದೇಶ ಸಂಖ್ಯೆ: ಪಸಂಮೀ/125/ಮೀಇಇ/2013, ದಿನಾಂಕ: 21-02-2014ರ ಅನ್ವಯ ಕೆರೆಗಳ ಗುತ್ತಿಗೆ ಅವಧಿ ಮುಗಿದ ನಂತರ ಅಥವಾ ಕೆರೆಗಳ ನವೀಕರಣ ಮೊತ್ತವನ್ನು ಸಕಾಲದಲ್ಲಿ ಪಾವತಿ ಮಾಡದಿದ್ದಲ್ಲಿ, ಮರುಹರಾಜು ಮಾಡಬಹುದಾಗಿದೆ. 2019-20ನೇ ಸಾಲಿನ ಮೀನುಗಾರಿಕಾ ಫಸಲಿ ವರ್ಷದಲ್ಲಿ ಬಂಗಾರಪೇಟೆ ಕ್ಷೇತ್ರದಲ್ಲಿ ಯಾವುದೇ ಇಲಾಖಾ ಕೆರೆಗಳನ್ನು ಮರುಹರಾಜು ಮಾಡಿರುವುದಿಲ್ಲ. |
| ಈ) | ಕಳೆದ ಮೂರು ವರ್ಷಗಳಿಂದ ಹರಾಜು ನಡೆಸದೆ ಪುನಃ ಮೀನುಗಾರಿಕೆಗಾಗಿ ಮಂಜೂರು ಮಾಡಿದ ಕೆರೆ ಗಳೆಷ್ಟು; ಅವು ಯಾವುವು; ಯಾರಿಗೆ ಮಂಜೂರು ಮಾಡ ಲಾಗಿದೆ? (ಸಂಪೂರ್ಣ ವಿವರ ನೀಡುವುದು) | ಕಳೆದ 3 ವರ್ಷಗಳಿಂದ ಹರಾಜು ನಡೆಸದೆ ಪುನಃ ಯಾವುದೇ ಕೆರೆಗಳ ಮೀನು ಪಾಶುವಾರು ಹಕ್ಕನ್ನು ನೀಡಿರುವುದಿಲ್ಲ. |

ಸಂಖ್ಯೆ: ಪಸಂಮೀ ಇ-37 ಮೀಇಯೋ 2020

(ಕೋಟ ಶ್ರೀನಿವಾಸ ಪೂಜಾರಿ)
ಮುಜರಾಯಿ, ಮೀನುಗಾರಿಕೆ ಹಾಗೂ
ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ S.N. ನಾರಾಯಣಸ್ವಾಮಿ ಕೆ.ಎಂ.
(ಬಂಗಾರಪೇಟೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 9

132 ರ ಅನುಬಂಧ -1

ಅನುಬಂಧ -1

ಅನುಬಂಧ

ಮೀನುಗಾರರ ಅಭಿವೃದ್ಧಿ ಮತ್ತು ಮಾರಾಟ ಸಹಕಾರ ಸಂಘ(ನಿ)

ಜನತಾ ಬಜಾರ್,

ಪೋಲೇನಹಳ್ಳಿ, ದೋಣಿಮಡುಗು ಅಂಚೆ, ಬಂಗಾರಪೇಟೆ ತಾ, ಕೋಲಾರ ಜಿಲ್ಲೆ

ಅಂತಿಮ ಮತದಾರರ ಪಟ್ಟಿ

| ಕ್ರಸಂ | ಷೇರು ಸಂಖ್ಯೆ | ಸದಸ್ಯರ ಹೆಸರು | ತಂದೆ/ಗಂಡನ ಹೆಸರು | ಗ್ರಾಮ | ಅಂಚೆ |
|---|---|---|---|---|---|
| 1 | 2/1 | ಟಿ.ರವಿ | ತಿಮ್ಮರಾಜು | ಪೋಲೇನಹಳ್ಳಿ | ದೋಣಿಮಡುಗು |
| 2 | 2/2 | ಪ್ರಕಾಶ್ | ರಾಮರಾಜು | ಪೋಲೇನಹಳ್ಳಿ | ದೋಣಿಮಡುಗು |
| 3 | 2/3 | ಮುರಳಿ | ಲೇಟ್ ಕೃಷ್ಣರಾಜು | ಪೋಲೇನಹಳ್ಳಿ | ದೋಣಿಮಡುಗು |
| 4 | 2/4 | ಕಮಲ | [illegible] | ಪೋಲೇನಹಳ್ಳಿ | ದೋಣಿಮಡುಗು |
| 5 | 2/5 | ಶೀಲಾ | ನಾಗಮಣಿ | ಪೋಲೇನಹಳ್ಳಿ | ದೋಣಿಮಡುಗು |
| 6 | 2/6 | ದಿಲೀಪ್ ಕುಮಾರ್ | ಕೃಷ್ಣಮೂರ್ತಿ | ಪೋಲೇನಹಳ್ಳಿ | ದೋಣಿಮಡುಗು |
| 7 | 2/7 | ಜೀವಿತಾ | ಕೃಷ್ಣಮೂರ್ತಿ | ಪೋಲೇನಹಳ್ಳಿ | ದೋಣಿಮಡುಗು |
| 8 | 2/8 | ರೂಪ | ಮನೋಹರ್ ರಾಜು | ಪೋಲೇನಹಳ್ಳಿ | ದೋಣಿಮಡುಗು |
| 9 | 2/9 | ರುಕ್ಮಿಣಿ | ವೆಂಕಟರಾಮರಾಜು | ಪೋಲೇನಹಳ್ಳಿ | ದೋಣಿಮಡುಗು |
| 10 | 2/14 | ವೆಂಕಟೇಶ್ | ಕೋಲಾರಪ್ಪ | ಪೋಲೇನಹಳ್ಳಿ | ದೋಣಿಮಡುಗು |
| 11 | 2/15 | ನಾಗರಾಜು | ಮುನಿಹನುಮನಬೋವಿ | ಪೋಲೇನಹಳ್ಳಿ | ದೋಣಿಮಡುಗು |
| 12 | 2/16 | ವೆಂಕಟೇಶ | ಪಾಪಣ್ಣ | ಪೋಲೇನಹಳ್ಳಿ | ದೋಣಿಮಡುಗು |
| 13 | 2/17 | ಗೋವಿಂದಪ್ಪ | ಈರಪ್ಪ | ಪೋಲೇನಹಳ್ಳಿ | ದೋಣಿಮಡುಗು |
| 14 | 2/18 | ಚಿಕ್ಕಪ್ಪ | ವೆಂಕಟೇಶಪ್ಪ | ಪೋಲೇನಹಳ್ಳಿ | ದೋಣಿಮಡುಗು |
| 15 | 2/20 | ವೆಂಕಟರಾಮರಾಜು | ಕೋದಂಡರಾಮರಾಜು | ಪೋಲೇನಹಳ್ಳಿ | ದೋಣಿಮಡುಗು |
| 16 | 2/21 | [illegible] | ವೆಂಕಟೇಶ | ಪೋಲೇನಹಳ್ಳಿ | ದೋಣಿಮಡುಗು |
| 17 | 2/22 | ಶ್ರೀನಿವಾಸ | ದೊಡ್ಡಕೊಳಂಜಪ್ಪ | ಕುಂದರಸನಹಳ್ಳಿ | ಬತ್ತಲಹಳ್ಳಿ |
| 18 | 2/23 | ಬಸವರಾಜು | ಚಿಕ್ಕಕೊಳಂಜಪ್ಪ | ಕುಂದರಸನಹಳ್ಳಿ | ಬತ್ತಲಹಳ್ಳಿ |
| 19 | 2/24 | ಚೆನ್ನಪ್ಪ | ವೆಂಕಟರಾಮಪ್ಪ | ಕುಂದರಸನಹಳ್ಳಿ | ಬತ್ತಲಹಳ್ಳಿ |
| 20 | 2/25 | ಷಣ್ಮುಗ | | ಕುಂದರಸನಹಳ್ಳಿ | ಬತ್ತಲಹಳ್ಳಿ |
| 21 | 2/27 | ರಾಮಪ್ಪ | ಚಿಕ್ಕಕೊಳಂಜಪ್ಪ | ಕುಂದರಸನಹಳ್ಳಿ | ಬತ್ತಲಹಳ್ಳಿ |
| 22 | 2/28 | ವಸಂತ | ದೊಡ್ಡಕೊಳಂಜಪ್ಪ | ಕುಂದರಸನಹಳ್ಳಿ | ಬತ್ತಲಹಳ್ಳಿ |

| | | | | | |
|---|---|---|---|---|---|
| 3 | 2/30 | ಜೀರಮ್ಮ | ಕೃಷ್ಣಪ್ಪ | ಸಾಕರಸನಹಳ್ಳಿ | ಬತ್ತಲಹಳ್ಳಿ |
| 24 | 2/31 | ಮಂಜು | ಕೃಷ್ಣಪ್ಪ | ಸಾಕರಸನಹಳ್ಳಿ | ಬತ್ತಲಹಳ್ಳಿ |
| 25 | 2/31/1 | ಗಂಗಾಧರ | ಲೇಟ್ ಶಿವಪ್ಪ | ದೋಣಿಮಡುಗು | ದೋಣಿಮಡುಗು |
| 26 | 2/32 | ಮುನಿಯಪ್ಪ | ಬೋಡಪ್ಪ | ಬತ್ತಲಹಳ್ಳಿ | ಬತ್ತಲಹಳ್ಳಿ |
| 27 | 2/35 | ಜಯಲಕ್ಷಮ್ಮ | ವೆಂಕಟೇಶರಾಜು | ದೋಣಿಮಡುಗು | ದೋಣಿಮಡುಗು |
| 28 | 2/39 | ವೆಂಕಟಪ್ಪ | ಏಳೂರು ಮುನಿಸ್ವಾಮಿ | ಮುಷ್ಟ್ರಹಳ್ಳಿ | ದೋಣಿಮಡುಗು |
| 29 | 2/43 | ಜನಾರ್ಧನರಾಜು | ಕೋದಂಡರಾಮರಾಜು | ಪೋಲೇನಹಳ್ಳಿ | ದೋಣಿಮಡುಗು |
| 30 | 2/44 | ವಿನೋದ್ ರಾಜು | ಕೋದಂಡರಾಮರಾಜು | ಪೋಲೇನಹಳ್ಳಿ | ದೋಣಿಮಡುಗು |
| 31 | 2/45 | ರಮಾದೇವಿ | ಶಿವಶಂಕರರಾಜು | ಪೋಲೇನಹಳ್ಳಿ | ದೋಣಿಮಡುಗು |
| 32 | 2/54 | ಪದ್ಮಮ್ಮ | ಲಕ್ಷ್ಮಕ್ಕ | ಪೋಲೇನಹಳ್ಳಿ | ದೋಣಿಮಡುಗು |
| 33 | 2/57 | ಅಪ್ಪ | ಗೋವಿಂದಪ್ಪ | ಪೋಲೇನಹಳ್ಳಿ | ದೋಣಿಮಡುಗು |
| 34 | 2/67 | ವೆಂಕಟೇಶ | [illegible]ಪ್ಪ [illegible] | ಪೋಲೇನಹಳ್ಳಿ | ದೋಣಿಮಡುಗು |
| 35 | 2/70 | ರಾಮಕ್ಕ | ಕೋಳಾಲಪ್ಪ | ಪೋಲೇನಹಳ್ಳಿ | ದೋಣಿಮಡುಗು |
| 36 | 2/71 | ಮುನಿಯಪ್ಪ | ದಾಸನಬೋವಿ | ಪೋಲೇನಹಳ್ಳಿ | ದೋಣಿಮಡುಗು |
| 37 | 2/73 | ನಾಗಲಕ್ಷ್ಮಿ | ಶಂಕರರಾಜು | ಪೋಲೇನಹಳ್ಳಿ | ದೋಣಿಮಡುಗು |
| 38 | 2/74 | ವೆಂಕಟೇಶ | ಮೋಟಪ್ಪ | ಪೋಲೇನಹಳ್ಳಿ | ದೋಣಿಮಡುಗು |
| 39 | 2/78 | ಚಕಾರ್ಲಪ್ಪ | ಪಾಪನ್ನ | ಪೋಲೇನಹಳ್ಳಿ | ದೋಣಿಮಡುಗು |
| 40 | 2/80 | ಕೆ.ವಿ.ಕೃಷ್ಣಪ್ಪ | ವೆಂಕಟಪ್ಪ | ಕುಂದರಸನಹಳ್ಳಿ | ಬತ್ತಲಹಳ್ಳಿ |
| 41 | 2/85 | ಶ್ರೀನಿವಾಸ | ಬದ್ರಪ್ಪ | ಪೋಲೇನಹಳ್ಳಿ | ದೋಣಿಮಡುಗು |
| 42 | 2/87 | ರೇಖ | ಯೋಗೇಶ್ ರಾಜು | ಪೋಲೇನಹಳ್ಳಿ | ದೋಣಿಮಡುಗು |
| 43 | 2/88 | ಯೋಗೇಶ್ ರಾಜು | ಬಾಸ್ಕರ್ ರಾಜು | ಪೋಲೇನಹಳ್ಳಿ | ದೋಣಿಮಡುಗು |
| 44 | 2/94 | ಸುರೇಶ | ಶಾಂತಮ್ಮ | ಪೋಲೇನಹಳ್ಳಿ | ದೋಣಿಮಡುಗು |
| 45 | 1/6 | ಗೋಪಾಲರಾಜು | ಚಿಕ್ಕ ಉದ್ದಾರಿರಾಜು | ಬತ್ತಲೂರು | ದೋಣಿಮಡುಗು |
| 46 | 1/7 | ಕೃಷ್ಣರಾಜು | ದೊಡ್ಡ ಉದ್ದಾರಿರಾಜು | ಬತ್ತಲೂರು | ದೋಣಿಮಡುಗು |
| 47 | 1/8 | ಮುನಿಯಪ್ಪ | ದೊಡ್ಡ ಉದ್ದಾರಿರಾಜು | ಬತ್ತಲೂರು | ದೋಣಿಮಡುಗು |
| 48 | 1/9 | ನಂಜುಂಡರಾಜು | ದೊಡ್ಡ ಉದ್ದಾರಿರಾಜು | ಬತ್ತಲೂರು | ದೋಣಿಮಡುಗು |
| 49 | 1/13 | ಮುನಿರಾಜು | ಮುನಿಸ್ವಾಮಿರಾಜು | ಬತ್ತಲೂರು | ದೋಣಿಮಡುಗು |

| 50 | 1/16 | ತಿಮ್ಮರಾಜು | ದೊಡ್ಡ ಉದ್ದಾರಿರಾಜು | ಬತ್ತಲೂರು | ದೋಣಿಮಡುಗು |
|---|---|---|---|---|---|
| 51 | 1/19 | ವೆಂಕಟೇಶರಾಜು | ಬೈರರಾಜು | ದೋಣಿಮಡುಗು | ದೋಣಿಮಡುಗು |
| 52 | 1/21 | ಸಾವಿತ್ರಮ್ಮ | ಲೇಟ್ ಕೃಷ್ಣರಾಜು | ಪೋಲೇನಹಳ್ಳಿ | ದೋಣಿಮಡುಗು |
| 53 | 1/22 | ಕೃಷ್ಣರಾಜು | ಮುನಿಸ್ವಾಮಿರಾಜು | ಪೋಲೇನಹಳ್ಳಿ | ದೋಣಿಮಡುಗು |
| 54 | 1/24 | ಗೋವಿಂದಮ್ಮ | ಕೃಷ್ಣರಾಜು | ಪೋಲೇನಹಳ್ಳಿ | ದೋಣಿಮಡುಗು |
| 55 | 1/26 | ಟಿ.ಮುನಿರಾಜು | ತಿಮ್ಮರಾಜು | ಪೋಲೇನಹಳ್ಳಿ | ದೋಣಿಮಡುಗು |
| 56 | 1/29 | ಜಯಮ್ಮ | ಮುನಿರಾಜು | ಪೋಲೇನಹಳ್ಳಿ | ದೋಣಿಮಡುಗು |
| 57 | 1/30 | ಕೃಷ್ಣಮೂರ್ತಿ | ಮುನಿರಾಜು | ಪೋಲೇನಹಳ್ಳಿ | ದೋಣಿಮಡುಗು |
| 58 | 1/31 | ಶ್ರೀಮತಮ್ಮ | ಕೃಷ್ಣಮೂರ್ತಿ | ಪೋಲೇನಹಳ್ಳಿ | ದೋಣಿಮಡುಗು |
| 59 | 1/32 | ಸುಶೀಲಮ್ಮ | ತಿಮ್ಮರಾಜು | ಪೋಲೇನಹಳ್ಳಿ | ದೋಣಿಮಡುಗು |
| 60 | 1/33 | ಲಕ್ಷ್ಮಕ್ಕ | ತಿಮ್ಮರಾಜು | ಪೋಲೇನಹಳ್ಳಿ | ದೋಣಿಮಡುಗು |
| 61 | 1/35 | ಮಲ್ಲೇಶಪ್ಪ | ಮುನಿಹನುಮನಬೋವಿ | ಪೋಲೇನಹಳ್ಳಿ | ದೋಣಿಮಡುಗು |
| 62 | 1/36 | ಗೋವಿಂದಪ್ಪ | ಮುನಿಹನುಮನಬೋವಿ | ಪೋಲೇನಹಳ್ಳಿ | ದೋಣಿಮಡುಗು |
| 63 | 1/37 | ದಾಸನಬೋವಿ | ದಾಸನಬೋವಿ | ಪೋಲೇನಹಳ್ಳಿ | ದೋಣಿಮಡುಗು |
| 64 | 1/39 | ಟಿ.ನಾಗರಾಜು | ತಿಮ್ಮರಾಜು | ದೋಣಿಮಡುಗು | ದೋಣಿಮಡುಗು |
| 65 | 1/47 | ವೆಂಕಟೇಶಪ್ಪ | ನಡಿಪನ್ನ | ಪೋಲೇನಹಳ್ಳಿ | ದೋಣಿಮಡುಗು |
| 66 | 1/63 | ರಮೇಶ | ಕೃಷ್ಣರಾಜು | ಪೋಲೇನಹಳ್ಳಿ | ದೋಣಿಮಡುಗು |
| 67 | 1/64 | ರಾಮು | ತಿಮ್ಮರಾಜು | ಪೋಲೇನಹಳ್ಳಿ | ದೋಣಿಮಡುಗು |
| 68 | 1/73 | ರಾಮಕೃಷ್ಣಪ್ಪ | ದಾಸಪ್ಪ | ಮುಷ್ಟ್ರಹಳ್ಳಿ | ದೋಣಿಮಡುಗು |
| 69 | 1/77 | ರಮೇಶ | ಲೇಟ್‌ಕೃಷ್ಣರಾಜು | ಸಾಕರಸನಹಳ್ಳಿ | ಬತ್ತಲಹಳ್ಳಿ |
| 70 | 1/81 | ಕೊಂಡಪ್ಪ | ಕೋಡಪ್ಪ | ಪೋಲೇನಹಳ್ಳಿ | ದೋಣಿಮಡುಗು |
| 71 | 1/85 | ಚಿನ್ನಕ್ಕ | ಮುನೀರಪ್ಪ | ಪೋಲೇನಹಳ್ಳಿ | ದೋಣಿಮಡುಗು |
| 72 | 1/86 | ಬಾಲಾಜಿ | ವೆಂಕಟರಾಜು | ಪೋಲೇನಹಳ್ಳಿ | ದೋಣಿಮಡುಗು |
| 73 | 1/87 | ಲಕ್ಷ್ಮಕ್ಕ | ಚಿನ್ನಪ್ಪ | ಪೋಲೇನಹಳ್ಳಿ | ದೋಣಿಮಡುಗು |
| 74 | 1/88 | ಲಕ್ಷ್ಮಕ್ಕ | ಲೇಟ್‌ಕೃಷ್ಣಪ್ಪ | ಪೋಲೇನಹಳ್ಳಿ | ದೋಣಿಮಡುಗು |
| 75 | 1/89 | ಚಿನ್ನಪ್ಪ | ವೀರಭದ್ರಪ್ಪ | ಪೋಲೇನಹಳ್ಳಿ | ದೋಣಿಮಡುಗು |
| 76 | 1/90 | ವೆಂಕಟೇಶಪ್ಪ | ವೀರಭದ್ರಪ್ಪ | ಪೋಲೇನಹಳ್ಳಿ | ದೋಣಿಮಡುಗು |

102

| 77 | 1/92 | ಬಾಲಮ್ಮ | ವೀರಭದ್ರಪ್ಪ | ಪೋಲೇನಹಳ್ಳಿ | ದೋಣಿಮಡುಗು |
|---|---|---|---|---|---|
| 78 | 1/93 | ಕೃಷ್ಣಪ್ಪ | ಗಂಗಪ್ಪ | ಪೋಲೇನಹಳ್ಳಿ | ದೋಣಿಮಡುಗು |
| 79 | 1/94 | ನಾರಾಯಣಪ್ಪ | ಲೇಟ್ ವೆಂಕಟೇಶಪ್ಪ | ಪೋಲೇನಹಳ್ಳಿ | ದೋಣಿಮಡುಗು |
| 80 | 1/96 | ಮುನಿಯಮ್ಮ | ಹನುಮನಬೋವಿ | ಪೋಲೇನಹಳ್ಳಿ | ದೋಣಿಮಡುಗು |
| 81 | 1/97 | ಸಾದಮ್ಮ | ಲೇಟ್ ಶಿವಪ್ಪ | ದೋಣಿಮಡುಗು | ದೋಣಿಮಡುಗು |
| 82 | 7/66 | ಬಿ.ರಾಜಗೋಪಾಲ | ಬೈರರಾಜು | ದೋಣಿಮಡುಗು | ದೋಣಿಮಡುಗು |
| 83 | 7/67 | ಸುಮಂತರಾಜು | ರಾಜುಗೋಪಾಲ | ದೋಣಿಮಡುಗು | ದೋಣಿಮಡುಗು |
| 84 | 7/68 | ಚಿರಂಜೀವಿ | ರಾಜುಗೋಪಾಲ | ದೋಣಿಮಡುಗು | ದೋಣಿಮಡುಗು |
| 85 | 7/72 | ಮುರಳಿ.ಕೆ | ಕೃಷ್ಣರಾಜು | ಪೋಲೇನಹಳ್ಳಿ | ದೋಣಿಮಡುಗು |
| 86 | 7/55 | ಕೆಂಪಣ್ಣ | ಕೃಷ್ಣಪ್ಪ | ಕುಂದರಸನಹಳ್ಳಿ | ಬತ್ತಲಹಳ್ಳಿ |
| 87 | 7/74 | ಸಂಪಂಗಿರಾಮಯ್ಯ | ವೆಂಕಟಪ್ಪ | ಬತ್ತಲಹಳ್ಳಿ | ಬತ್ತಲಹಳ್ಳಿ |
| 88 | 7/76 | ಕಲೀಲ್ ಪಾಷ | ಅಮೀರ್ ಜಾನ್ | ತನಿಮಡುಗು | ದೋಣಿಮಡುಗು |
| 89 | 7/78 | ಟಿ.ಮುನಿಯಪ್ಪ | ಊಸಪ್ಪ | ತನಿಮಡುಗು | ದೋಣಿಮಡುಗು |
| 90 | 7/80 | ಶಬಾನ ಬಾನು | ಖಲೀಲ್ ಪಾಷ | ತನಿಮಡುಗು | ದೋಣಿಮಡುಗು |
| 91 | 7/82 | ವೆಂಕಟೇಶ್ | ಗೋವಿಂದಪ್ಪ | ತನಿಮಡುಗು | ದೋಣಿಮಡುಗು |
| 92 | 5/38 | ಯಶೋದಮ್ಮ | ರಾಮಭೂಷಣ | ತನಿಮಡುಗು | ದೋಣಿಮಡುಗು |
| 93 | 5/39 | ರೂಪೇಶ್ | ಧನಪಾಲ್ | ತನಿಮಡುಗು | ದೋಣಿಮಡುಗು |
| 94 | 5/40 | ಆನಂದ | ತಿಮ್ಮರಾಯಪ್ಪ | ತನಿಮಡುಗು | ದೋಣಿಮಡುಗು |
| 95 | 5/41 | ಚಂದ್ರಪ್ಪ | ಮುನೆಪ್ಪ | ತನಿಮಡುಗು | ದೋಣಿಮಡುಗು |
| 96 | 5/42 | ನಾಗರಾಜ | ತಿಮ್ಮಪ್ಪ | ತನಿಮಡುಗು | ದೋಣಿಮಡುಗು |
| 97 | 5/45 | ಪಾಪಮ್ಮ | ಷಣ್ಮುಗ | ಕುಂದರಸನಹಳ್ಳಿ | ಬತ್ತಲಹಳ್ಳಿ |
| 98 | 5/49 | ರಾಣಿಮ್ಮ | ಬಸವರಾಜು | ಕುಂದರಸನಹಳ್ಳಿ | ಬತ್ತಲಹಳ್ಳಿ |
| 99 | 5/46 | ಮಲ್ಲಿಕಮ್ಮ | ರಾಮಪ್ಪ | ಕುಂದರಸನಹಳ್ಳಿ | ಬತ್ತಲಹಳ್ಳಿ |
| 100 | 5/47 | ಮುನಿರತ್ನಮ್ಮ | ಚನ್ನಪ್ಪ | ಕುಂದರಸನಹಳ್ಳಿ | ಬತ್ತಲಹಳ್ಳಿ |
| 101 | 5/48 | ಮುಂಗಮ್ಮ | ವಸಂತ | ಕುಂದರಸನಹಳ್ಳಿ | ಬತ್ತಲಹಳ್ಳಿ |
| 102 | 5/50 | ಶೀಲಾ | ನಾಗಮಣಿ | ಪೋಲೇನಹಳ್ಳಿ | ದೋಣಿಮಡುಗು |
| 103 | 5/51 | ಸವಿತಾ | ಗೋಪಿನಾಥ | ಪೋಲೇನಹಳ್ಳಿ | ದೋಣಿಮಡುಗು |

| 104 | 3/1 | ಶ್ರೀನಿವಾಸ | ಮುನಿಸ್ವಾಮಿ | ಕುಂದರಸನಹಳಿ | ಬತ್ತಲಹಳ್ಳಿ |
|---|---|---|---|---|---|
| 105 | 3/2 | ಮುನಿಸ್ವಾಮಿ | ನಾರಾಯಣಪ್ಪ | ಕುಂದರಸನಹಳಿ | ಬತ್ತಲಹಳ್ಳಿ |
| 106 | 3/3 | ನಾರಾಯಣಪ್ಪ | ಪೋಡಪ್ಪ | ಕುಂದರಸನಹಳಿ | ಬತ್ತಲಹಳ್ಳಿ |
| 107 | 3/4 | ಶಂಕರನಾಗ್ | ಪೆದ್ದಪ್ಪಯ್ಯ | ಕುಂದರಸನಹಳಿ | ಬತ್ತಲಹಳ್ಳಿ |
| 108 | 3/5 | ಸುಲೋಚನಮ್ಮ | ಅನಂತನಾಗ್ | ಕುಂದರಸನಹಳಿ | ಬತ್ತಲಹಳ್ಳಿ |
| 109 | 3/6 | ನಾರಾಯಣಪ್ಪ | ಅಬ್ಬಯ್ಯಪ್ಪ | ಕುಂದರಸನಹಳಿ | ಬತ್ತಲಹಳ್ಳಿ |
| 110 | 3/7 | ಪಿ.ರಾಮಪ್ಪ | ಪೋಡಪ್ಪ | ಕುಂದರಸನಹಳಿ | ಬತ್ತಲಹಳ್ಳಿ |
| 111 | 3/8 | ರವಿ | ಅಬ್ಬಯ್ಯಪ್ಪ | ಕುಂದರಸನಹಳಿ | ಬತ್ತಲಹಳ್ಳಿ |
| 112 | 3/9 | ಚಿನ್ನಸ್ವಾಮಿ | ಕೃಷ್ಣಪ್ಪ | ಕುಂದರಸನಹಳಿ | ಬತ್ತಲಹಳ್ಳಿ |
| 113 | 3/10 | ರಾಮಕೃಷ್ಣ | ತಿಮ್ಮಪ್ಪನಾಯಕ | ಕುಂದರಸನಹಳಿ | ಬತ್ತಲಹಳ್ಳಿ |
| 114 | 3/11 | ಶ್ರೀರಾಮ | ಮುನೆಪ್ಪ ನಾಯಕ | ಕುಂದರಸನಹಳಿ | ಬತ್ತಲಹಳ್ಳಿ |
| 115 | 3/12 | ವೆಂಕಟೇಶ | ಚಿನ್ನಪ್ಪಯ್ಯ | ಕುಂದರಸನಹಳಿ | ಬತ್ತಲಹಳ್ಳಿ |
| 116 | 3/13 | ತಿಮ್ಮಕ್ಕ | ಲೇಟ್ ಗಂಗಪ್ಪ | ಪೋಲೇನಹಳ್ಳಿ | ದೋಣಿಮಡುಗು |
| 117 | 3/14 | ಶೋಭ | ಕೃಷ್ಣಪ್ಪ | ಪೋಲೇನಹಳ್ಳಿ | ದೋಣಿಮಡುಗು |
| 118 | 3/15 | ನಾರಾಯಣಪ್ಪ | ಮುನಿವೆಂಕಟಪ್ಪ | ಪೋಲೇನಹಳ್ಳಿ | ದೋಣಿಮಡುಗು |
| 119 | 3/16 | ಮುನಿಯಪ್ಪ | ಗೋವಿಂದಪ್ಪ | ಪೋಲೇನಹಳ್ಳಿ | ದೋಣಿಮಡುಗು |
| 120 | 3/17 | ರಾಮಚಂದ್ರ | ಮುನಿವೆಂಕಟಪ್ಪ | ಪೋಲೇನಹಳ್ಳಿ | ದೋಣಿಮಡುಗು |
| 121 | 3/18 | ಶ್ರೀರಾಮ | ನಾಗಪ್ಪ | ಪೋಲೇನಹಳ್ಳಿ | ದೋಣಿಮಡುಗು |
| 122 | 3/19 | ಹರೀಶ | ದಸರತಪ್ಪ | ಪೋಲೇನಹಳ್ಳಿ | ದೋಣಿಮಡುಗು |
| 123 | 3/20 | ದಶರಥಪ್ಪ | ವೀರಭದ್ರಪ್ಪ | ಪೋಲೇನಹಳ್ಳಿ | ದೋಣಿಮಡುಗು |
| 124 | 3/21 | ಶ್ರೀರಾಮ | ವೆಂಕಟೇಶ | ಪೋಲೇನಹಳ್ಳಿ | ದೋಣಿಮಡುಗು |
| 125 | 3/22 | ಸುಬ್ರಮಣಿ | ಚಿನ್ನಪ್ಪ | ಪೋಲೇನಹಳ್ಳಿ | ದೋಣಿಮಡುಗು |
| 126 | 3/23 | ಪ್ರೇಮ | ಟಿ.ರಾಮು | ಪೋಲೇನಹಳ್ಳಿ | ದೋಣಿಮಡುಗು |
| 127 | 3/24 | ಕೋದಂಡಪ್ಪ | ಕೋಡೆಪ್ಪ | ಪೋಲೇನಹಳ್ಳಿ | ದೋಣಿಮಡುಗು |
| 128 | 3/25 | ನರಸಿಂಹಪ್ಪ | ಕದಿರಪ್ಪ | ಸಾಕರಸನಹಳ್ಳಿ | ಬತ್ತಲಹಳ್ಳಿ |
| 129 | 3/26 | ಮಂಜುಳಾಚ | ಜಯಣ್ಣ | ಸಾಕರಸನಹಳ್ಳಿ | ಬತ್ತಲಹಳ್ಳಿ |
| 130 | 3/27 | ಮಾರುತಿ | ಕೋಡೆಪ್ಪ | ಸಾಕರಸನಹಳ್ಳಿ | ಬತ್ತಲಹಳ್ಳಿ |

(104)

| 131 | 3/28 | ವಿಶ್ವನಾಥ | ಕೃಷ್ಣಪ್ಪ | ಸಾಕರಸನಹಳ್ಳಿ | ಬತ್ತಲಹಳ್ಳಿ |
|---|---|---|---|---|---|
| 132 | 3/29 | ನಾರಾಯಣಗೌಡ | ವೆಂಕಟೇಗೌಡ | ಸಾಕರಸನಹಳ್ಳಿ | ಬತ್ತಲಹಳ್ಳಿ |
| 133 | 3/30 | ತಿಮ್ಮಪ್ಪ | ತಿಮ್ಮಪ್ಪ | ಸಾಕರಸನಹಳ್ಳಿ | ಬತ್ತಲಹಳ್ಳಿ |
| 134 | 3/31 | ಎಸ್.ಮಂಜುನಾಥ | ಸೀತಾರಾಮಪ್ಪ | ಸಾಕರಸನಹಳ್ಳಿ | ಬತ್ತಲಹಳ್ಳಿ |
| 135 | 3/32 | ಕೃಷ್ಣಪ್ಪ | ವೆಂಕಟರಾಯಪ್ಪ | ಕುಂದರಸನಹಳ್ಳಿ | ಬತ್ತಲಹಳ್ಳಿ |
| 136 | 3/33 | ಪೆರಮಾಳ್ | ದೊಡ್ಡಕೊಳಂಜಪ್ಪ | ಕುಂದರಸನಹಳ್ಳಿ | ಬತ್ತಲಹಳ್ಳಿ |
| 137 | 3/34 | ವೆಂಕಟೇಶ | ಚನ್ನರಾಯಪ್ಪ | ಕುಂದರಸನಹಳ್ಳಿ | ಬತ್ತಲಹಳ್ಳಿ |
| 138 | 3/35 | ಮಂಜುನಾಥ | ಲೇ ಟ್ ಚಿನ್ನಪ್ಪ | ಕುಂದರಸನಹಳ್ಳಿ | ಬತ್ತಲಹಳ್ಳಿ |
| 139 | 3/36 | ವೇಲು | ಮುನಿಸ್ವಾಮಿ | ಕುಂದರಸನಹಳ್ಳಿ | ಬತ್ತಲಹಳ್ಳಿ |
| 140 | 3/37 | ಮುರುಗೇಶ್ | ವೆಂಕಟಪ್ಪ | ಕುಂದರಸನಹಳ್ಳಿ | ಬತ್ತಲಹಳ್ಳಿ |
| 141 | 3/38 | ಶ್ರೀನಿವಾಸ | ಕೃಷ್ಣಪ್ಪ | ಕುಂದರಸನಹಳ್ಳಿ | ಬತ್ತಲಹಳ್ಳಿ |
| 142 | 3/39 | ವೆಂಕಟೇಶಪ್ಪ | ಯಬ್ಬಿರಪ್ಪ | ಕುಂದರಸನಹಳ್ಳಿ | ಬತ್ತಲಹಳ್ಳಿ |
| 143 | 3/40 | ಮಂಗಮ್ಮ | ಶಂಕರಪ್ಪ | ಸಾಕರಸನಹಳ್ಳಿ | ಬತ್ತಲಹಳ್ಳಿ |
| 144 | 3/41 | ಲಕ್ಷ್ಮಮ್ಮ | ತಿಮ್ಮಯ್ಯ | ಕುಂದರಸನಹಳ್ಳಿ | ಬತ್ತಲಹಳ್ಳಿ |
| 145 | 3/42 | ಯಬ್ಬಿರಪ್ಪ | ತಿಮ್ಮಯ್ಯ | ಕುಂದರಸನಹಳ್ಳಿ | ಬತ್ತಲಹಳ್ಳಿ |

[illegible] 145 [illegible]

ಕಾರ್ಯದರ್ಶಿ
ರೇಷ್ಮೆಗಾರರ ಅಭಿವೃದ್ಧಿ ಮತ್ತು [illegible]
ಸಂಘ (ನಿ.,) [illegible]
[illegible]

[illegible] 145 [illegible]

ATTESTED BY ME

ಕಾರ್ಯದರ್ಶಿ
ರೇಷ್ಮೆಗಾರರ ಅಭಿವೃದ್ಧಿ ಮತ್ತು ಮಾರಾಟ ಸಹಕಾರ
ಸಂಘ (ನಿ.,) [illegible]
[illegible]

( [illegible] )

ಮಾನ್ಯ ವಿಧಾನಸಭೆ ಸದಸ್ಯರಾದ ಶ್ರೀ ಎ.N. ನಾರಾಯಣಸ್ವಾಮಿ (ಬಂಗಾರಪೇಟೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1328 ಅನುಬಂಧ -2



ಅನುಬಂಧ-2

| ಕ್ರಮ ಸಂಖ್ಯೆ | ಜಿಲ್ಲೆ | ವಿದ್ಯಾರ್ಥಿನಿಲಯಗಳ ಸ್ಥಳ | ವಿದ್ಯಾರ್ಥಿಗಳ ಸಂಖ್ಯಾಬಲ |
|---|---|---|---|
| 3 | ದಾವಣಗೆರೆ | ದಾವಣಗೆರೆ ಟೌನ್ | 100 |
| 4 | ಚಿಕ್ಕಬಳ್ಳಾಪುರ ಟೌನ್ | ಚಿಕ್ಕಬಳ್ಳಾಪುರ ಟೌನ್ | 100 |
| 5 | ತುಮಕೂರು | ತುಮಕೂರು ಟೌನ್ | 100 |
| 6 | ಕೋಲಾರ | ಕೋಲಾರ ಟೌನ್ | 100 |
| 7 | ಶಿವಮೊಗ್ಗ | ಶಿವಮೊಗ್ಗ ಟೌನ್ | 100 |
| 8 | ಮೈಸೂರು | ಮೈಸೂರು ಟೌನ್ | 100 |
| 9 | ಮಂಡ್ಯ | ಮಂಡ್ಯ ಟೌನ್ | 100 |
| 10 | ಚಾಮರಾಜನಗರ | ಚಾಮರಾಜನಗರ ಟೌನ್ | 100 |
| 11 | ದಕ್ಷಿಣ ಕನ್ನಡ | ಮಂಗಳೂರು ಟೌನ್ | 100 |
| 12 | ಕೊಡಗು | ಕುಶಾಲನಗರ, ಸೋಮವಾರಪೇಟೆ ತಾಲ್ಲೂಕು | 100 |
| 13 | ಹಾಸನ | ಹಾಸನ ಟೌನ್ | 100 |
| 14 | ಉಡುಪಿ | ಉಡುಪಿ ಟೌನ್ | 100 |
| 15 | ಚಿಕ್ಕಮಗಳೂರು | ಚಿಕ್ಕಮಗಳೂರು ಟೌನ್ (ನರಿಗುಡ್ಡೇನಹಳ್ಳಿ) | 100 |
| 16 | ಬೆಳಗಾಂ | ಬೆಳಗಾಂ ಟೌನ್ | 100 |
| 17 | ಬಿಜಾಪುರ | ಬಿಜಾಪುರ ಟೌನ್ | 100 |
| 18 | ಬಾಗಲಕೋಟೆ | ಬಾಗಲಕೋಟೆ ಟೌನ್ | 100 |
| 19 | ಗದಗ್ | ಗದಗ್ ಟೌನ್ | 100 |
| 20 | ಹಾವೇರಿ | ಹಾವೇರಿ ಟೌನ್ | 100 |
| 21 | ಧಾರವಾಡ | ಧಾರವಾಡ ಟೌನ್ | 100 |
| 22 | ಉತ್ತರ ಕನ್ನಡ | ದಾಂಡೇಲಿ ನಗರ, ಹಳಿಯಾಳ ತಾಲ್ಲೂಕು | 100 |
| 23 | ಗುಲ್ಬರ್ಗಾ | ಗುಲ್ಬರ್ಗಾ ಟೌನ್ | 100 |
| 24 | ಕೊಪ್ಪಳ | ಗಂಗಾವತಿ ಟೌನ್ | 100 |
| 25 | ಯಾದಗಿರಿ | ಯಾದಗಿರಿ ಟೌನ್ | 100 |
| 26 | ಬಳ್ಳಾರಿ | ಬಳ್ಳಾರಿ ಟೌನ್ | 100 |
| 27 | ರಾಯಚೂರು | ರಾಯಚೂರು ಟೌನ್ | 100 |
| 28 | ಬೀದರ್ | ಬೀದರ್ ಟೌನ್ | 100 |

ಹೆಚ್.ಬಿ. ರಘುನಾಥ್,
ಸರ್ಕಾರದ ಅಧೀನ ಕಾರ್ಯದರ್ಶಿ-2,
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

ಸರ್ಕಾರದ ಆದೇಶ ಸಂಖ್ಯೆ ಹಿಂವಕ 488 ಬಿಎಂಎಸ್ 2013, ಬೆಂಗಳೂರು, ದಿನಾಂಕ 31-10-2013 ಕ್ಕೆ

ಅನುಬಂಧ-2

| ಕ್ರಮ ಸಂಖ್ಯೆ | ವಿವರ | ವೇತನಶ್ರೇಣಿ (ರೂ.) | ಒಂದು ವಿದ್ಯಾರ್ಥಿನಿಲಯಕ್ಕೆ ಮಂಜೂರು ಮಾಡಿದ ಹುದ್ದೆಗಳ ಸಂಖ್ಯೆ |
|---|---|---|---|
| 1 | ನಿಲಯ ಮೇಲ್ವಿಚಾರಕರು | 14550-26700 | 1 |
| 2 | ಅಡುಗೆಯವರು | 10400-16400 | 3 |
| 3 | ಅಡುಗೆ ಸಹಾಯಕರು | 9600-14550 | 2 |
| 4 | ರಾತ್ರಿ ಕಾವಲುಗಾರರು | 9600-14550 | 1 |
| | | ಒಟ್ಟು | 7 |

ಹೆಚ್.ಬಿ. ರಘುನಾಥ್,
ಸರ್ಕಾರದ ಅಧೀನ ಕಾರ್ಯದರ್ಶಿ-2,
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

ವಿಷಯ:- ಕರ್ನಾಟಕ ರಾಜ್ಯದ ಸರ್ಕಾರಿ ಸ್ವಾಮ್ಯದ ಜಲಸಂಪನ್ಮೂಲಗಳಾದ ಜಲಾಶಯಗಳು, ಕೆರೆಗಳು, ನದಿಗಳು, ತೊರೆಗಳು ಮತ್ತು ಅಳಿವೆಗಳು ಹಾಗೂ ಇತರೆ ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕಿನ ವಿಲೇವಾರಿಗೆ ಸಂಬಂಧಪಟ್ಟಂತೆ ರೂಪಿಸಿರುವ ಪರಿಷ್ಕೃತ ನಿಯಮಗಳ ಒಳನಾಡು ಮೀನುಗಾರಿಕಾ ಕಾರ್ಯನೀತಿ-2014ನ್ನು ಹೊರಡಿಸುವ ಬಗ್ಗೆ.

ಓದಲಾಗಿದೆ:- (1) ಸರ್ಕಾರದ ಆದೇಶ ಸಂಖ್ಯೆ:ಪಸಂಮೀ 167 ಮೀಇಇ 2005 ದಿನಾಂಕ:28/01/2006.

(2) ಮೀನುಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ:ಹಗುಪ (2)/130/2011-12, ದಿನಾಂಕ:14-11-2013 ಮತ್ತು 21-11-2013.

ಪ್ರಸ್ತಾವನೆ:

ರಾಜ್ಯದ ಹಿನ್ನೀರು ಮತ್ತು ಒಳನಾಡು ಜಲಸಂಪನ್ಮೂಲಗಳಲ್ಲಿ ಸುಸ್ಥಿರ ಮೀನುಗಾರಿಕೆ ಉತ್ತೇಜಿಸಲು ಮೀನುಗಾರಿಕೆ ಹಕ್ಕುಗಳ ವಿಲೇವಾರಿ ಸಂಬಂಧ 2006ರಲ್ಲಿ ಪ್ರಕಟಿಸಲಾದ ಗುತ್ತಿಗೆ ನಿಯಮಗಳನ್ನು ಪರಿಷ್ಕರಿಸಲು ಸರ್ಕಾರವು ನಿರ್ಧರಿಸಿದೆ.

ಕರ್ನಾಟಕ ರಾಜ್ಯದಲ್ಲಿ ಮೀನುಗಾರಿಕೆ ಇಲಾಖೆಯ ಆಡಳಿತ ವ್ಯಾಪ್ತಿಯಲ್ಲಿ ಒಟ್ಟು 5.65 ಲಕ್ಷ ಹೆಕ್ಟೇರ್ ಜಲವಿಸ್ತೀರ್ಣವುಳ್ಳ ಜಲಾಶಯಗಳು ಮತ್ತು ಕೆರೆಗಳು ಇರುತ್ತವೆ. ಇವುಗಳಲ್ಲಿ 2.72 ಲಕ್ಷ ಹೆ. ಜಲವಿಸ್ತೀರ್ಣವುಳ್ಳ 82 ಜಲಾಶಯಗಳು, 1.72 ಲಕ್ಷ ಹೆ. ಜಲವಿಸ್ತೀರ್ಣವುಳ್ಳ 3399 ಕೆರೆಗಳು, 1.21 ಲಕ್ಷ ಹೆ. ಜಲವಿಸ್ತೀರ್ಣವುಳ್ಳ ಗ್ರಾಮ ಪಂಚಾಯಿತಿ ವ್ಯಾಪ್ತಿಯ ಕೆರೆಗಳು ಇರುತ್ತವೆ. ಅಲ್ಲದೆ, ಸುಮಾರು 5813 ಕಿ.ಮೀ. ಉದ್ದದ ನದಿಗಳು ಮತ್ತು ತೊರೆಗಳು ಇದ್ದು, ಈ ಎಲ್ಲಾ ಜಲಸಂಪನ್ಮೂಲಗಳಿಂದ ಕರ್ನಾಟಕದ ಒಳನಾಡು ಮೀನಿನ ಉತ್ಪಾದನೆ ಸುಮಾರು 2.00 ಲಕ್ಷ ಟನ್‌ನಷ್ಟಿದೆ. ಇದು ರಾಜ್ಯದ ಒಟ್ಟು ಮೀನಿನ ಉತ್ಪಾದನೆಯ ಶೇ.48ರಷ್ಟು ಇರುತ್ತದೆ. ಮುಂದಿನ ದಿನಗಳಲ್ಲಿ ಒಳನಾಡಿನ ಮೀನು ಉತ್ಪಾದನೆ ತೀವ್ರಗತಿಯಲ್ಲಿ ಬೆಳವಣಿಗೆಯಾಗುವ ನಿರೀಕ್ಷೆಯಿದ್ದು, ರಾಜ್ಯದ ಒಟ್ಟು ಮೀನು ಉತ್ಪಾದನೆಯಲ್ಲಿ ಹೆಚ್ಚಿನ ಉತ್ಪಾದನೆಯನ್ನು ಒಳನಾಡು ಮೀನು ಕೃಷಿಯಿಂದ ಒದಗಿಸುವ ಹೆಚ್ಚಿನ ಸಾಧ್ಯತೆಗಳಿರುತ್ತದೆ.

ರಾಜ್ಯದಲ್ಲಿರುವ ಬಹುಪಾಲು ಒಳನಾಡು ಜಲಸಂಪನ್ಮೂಲಗಳು ನೀರಿಗಾಗಿ ಮಳೆಯನ್ನೇ ಅವಲಂಬಿಸಿದ್ದು, ಹಲವು ಕೆರೆಗಳು ಮುಂಗಾರು ಮಳೆಯಿಂದ ತುಂಬುವ ಸಾಧ್ಯತೆಗಳಿದ್ದು, ಕೆಲವು ಕೆರೆಗಳು ಹಿಂಗಾರು ಮಳೆಯನ್ನು ಆಶ್ರಯಿಸಿರುತ್ತವೆ. ಹಾಗಾಗಿ ಒಳನಾಡು ಜಲಸಂಪನ್ಮೂಲಗಳಲ್ಲಿ ಸದಾ ನೀರು ನಿಲ್ಲುವ ಸರ್ವಕಾಲಿಕ ಕೆರೆಗಳ ಸಂಖ್ಯೆ ಬಹಳ ಕಡಿಮೆ ಇರುತ್ತವೆ. ಗರಿಷ್ಟ ಸಂಖ್ಯೆಯ ಕೆರೆಗಳು ಅರೆಕಾಲಿಕ ಕೆರೆಗಳಾಗಿದ್ದು, ಕೇವಲ 4-5 ತಿಂಗಳು ಅವಧಿಗೆ ನೀರು ನಿಲ್ಲುವ ಸಾಧ್ಯತೆ ಇದ್ದು, ಹಲವಾರು ಸಂದರ್ಭಗಳಲ್ಲಿ ಮಳೆಯನ್ನು ನಿರೀಕ್ಷಿಸಿ ಜಲಸಂಪನ್ಮೂಲಗಳಲ್ಲಿ ನೀರು ಶೇಖರಣೆ ಆಗಬಹುದೆಂದು ಭಾವಿಸಿ ಮೀನು ಕೃಷಿಕರು ಮೀನು ಪಾಶುವಾರು ಹಕ್ಕನ್ನು ಪಡೆದು ನಷ್ಟಗೊಂಡಿರುವ ಹಲವು ನಿದರ್ಶನಗಳಿವೆ. ಅಲ್ಲದೆ, ಮೀನು ಕೃಷಿಗೆ ಬಹು ಮುಖ್ಯವಾಗಿ ಮೀನುಮರಿಗಳ ಲಭ್ಯತೆ ಮುಂಗಾರು ಅವಧಿಯಲ್ಲಿರುವುದರಿಂದ, ಈ ಅವಧಿಗೆ ಮುಂಚೆ ಕೆರೆಗಳ ಮೀನು ಪಾಶುವಾರು ಹಕ್ಕನ್ನು ವಿಲೇವಾರಿ ಮಾಡಿ ಅರ್ಹ ಸಹಕಾರ ಸಂಘಗಳು ಮತ್ತು ವ್ಯಕ್ತಿಗೆ ಗುತ್ತಿಗೆಯನ್ನು ವರ್ಗಾಯಿಸದಿದ್ದಲ್ಲಿ ಮೀನು ಉತ್ಪಾದನೆ ಮೇಲೆ ಪ್ರತಿಕೂಲ ಪರಿಣಾಮ ಉಂಟಾಗುವ ಸಾಧ್ಯತೆಗಳು ಇರುತ್ತವೆ.

ಒಳನಾಡು ಜಲಸಂಪನ್ಮೂಲಗಳಲ್ಲಿ ಗರಿಷ್ಟ ಮೀನು ಉತ್ಪಾದನೆ ಮಾಡುವುದು ಸರ್ಕಾರದ ಮುಖ್ಯ ಗುರಿಯಾಗಿದ್ದು, ಇದಕ್ಕೆ ಪೂರಕವಾಗಿ ಮೀನು ಪಾಶುವಾರು ಹಕ್ಕಿನ ಗುತ್ತಿಗೆ ಆದೇಶಗಳನ್ನು ಸಕಾಲದಲ್ಲಿ ಅರ್ಹ ಸಹಕಾರ ಸಂಘಗಳಿಗೆ / ವ್ಯಕ್ತಿಗಳಿಗೆ ತಲುಪಿಸುವುದು, ಮತ್ತು ಉತ್ತಮ ತಳಿಯ ಗುಣಮಟ್ಟದ ಮೀನುಮರಿಗಳನ್ನು ಸಕಾಲದಲ್ಲಿ ಮೀನು ಕೃಷಿಕರಿಗೆ ಒದಗಿಸುವುದು ಸರ್ಕಾರದ ಉದ್ದೇಶವಾಗಿರುತ್ತದೆ.

ಕರ್ನಾಟಕ ರಾಜ್ಯದಲ್ಲಿ ಒಟ್ಟು ಸುಮಾರು 5.50 ಲಕ್ಷಕ್ಕೂ ಮೀರಿದ ಒಳನಾಡು ಮೀನುಗಾರರಿದ್ದು, ಅವರಲ್ಲಿ ಸುಮಾರು 1.50 ಲಕ್ಷಕ್ಕೂ ಮೀರಿದ ಮೀನುಗಾರರು ಸಕ್ರಿಯವಾಗಿ ಮೀನುಗಾರಿಕೆಯಲ್ಲಿ ತೊಡಗಿಸಿಕೊಂಡಿದ್ದಾರೆ. ಈ ಎಲ್ಲಾ ಮೀನುಗಾರರ ಸರ್ವತೋಮುಖ ಅಭಿವೃದ್ಧಿ, ಸಮಗ್ರ ಮೀನುಗಾರಿಕಾ ಚಟುವಟಿಕೆಗಳ ಮೇಲೆ ಅವಲಂಬಿತವಾಗಿರುತ್ತದೆ. ಈ ನಿಟ್ಟಿನಲ್ಲಿ ಮೀನುಗಾರರಿಗೆ ಗುಣಮಟ್ಟದ ಮೀನು ತಳಿಗಳನ್ನು ಅಭಿವೃದ್ದಿಪಡಿಸಿ, ಸಕಾಲದಲ್ಲಿ ಒದಗಿಸುವುದಕ್ಕಾಗಿ ಮೀನುಗಾರಿಕೆ ಇಲಾಖೆಯು ಕಾರ್ಯೋನ್ಮುಖವಾಗಿರುತ್ತದೆ. ಹೆಚ್ಚಿನ ಪಾಲಿನ ಮೀನುಗಾರರು ಸರ್ಕಾರಿ ಸ್ವಾಮ್ಯದ ಜಲಸಂಪನ್ಮೂಲಗಳನ್ನು ಗುತ್ತಿಗೆ ಪಡೆದು, ಮೀನು ಕೃಷಿ ಕೈಗೊಳ್ಳುವುದರಿಂದ, ಕ್ಲುಪ್ತ ಸಮಯದಲ್ಲಿ ಜಲಸಂಪನ್ಮೂಲಗಳ ಗುತ್ತಿಗೆ ಆದೇಶಗಳು ಅವರ ಕೈ ಸೇರುವುದು ಅತಿ ಮುಖ್ಯವಾಗಿರುತ್ತದೆ. ಆದುದರಿಂದ, ಒಳನಾಡು ಜಲಸಂಪನ್ಮೂಲಗಳನ್ನು ಗುತ್ತಿಗೆ ಪಡೆಯುವ ಕಾರ್ಯ ವಿಧಾನವನ್ನು ಸರಳೀಕರಿಸಿ, ಮೀನುಗಾರರನ್ನೇ ಕೇಂದ್ರ ಬಿಂದುವನ್ನಾಗಿರಿಸಿಕೊಂಡು ನೀತಿಯನ್ನು ರೂಪಿಸಿ, ಮೀನುಗಾರರು ಮತ್ತು ಅವರ ಸಹಕಾರ ಸಂಘಗಳಿಗೆ ಆದ್ಯತೆ ನೀಡಿ, ಗುತ್ತಿಗೆ ನೀಡುವ ಅಧಿಕಾರವನ್ನು ವಿಕೇಂದ್ರೀಕರಿಸಿ, "ಸಕಾಲ"ದಲ್ಲಿ ಗುತ್ತಿಗೆ ಆದೇಶಗಳು ಮೀನುಗಾರರ ಕೈ ಸೇರಬೇಕೆನ್ನುವ ಉದ್ದೇಶ ಸರ್ಕಾರದ್ದಾಗಿರುತ್ತದೆ.

ಪ್ರಸ್ತುತ ಜಾರಿಯಲ್ಲಿರುವ ಒಳನಾಡು ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕಿನ ವಿಲೇವಾರಿ ನಿಯಮಗಳು 2006 ರಿಂದ ಜಾರಿಗೆ ಬಂದಿದ್ದು, ಸುಮಾರು 8 ವರ್ಷಗಳಿಂದ ಈ ನಿಯಮಾನುಸಾರ ಒಳನಾಡು ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕನ್ನು ವಿಲೇವಾರಿ ಮಾಡಲಾಗುತ್ತಿದೆ. ಕಳೆದ 8 ವರ್ಷಗಳಿಂದ ಈ ನಿಯಮಗಳ ಅನುಷ್ಠಾನದ ಅವಧಿಯಲ್ಲಿ ದ್ವಂದ್ವತೆಗಳು, ನ್ಯೂನ್ಯತೆಗಳು, ಕೆರೆಗಳನ್ನು ವಿಲೇವಾರಿ ಮಾಡುವ "ಕಾಲಕಟ್ಟು" ಯಲ್ಲಿ ಹೊಂದಾಣಿಕೆಯಿಲ್ಲದೆ ಇರುವುದು ಮತ್ತು ಈ ನಿಯಮಗಳ ಮೇಲೆ ರಾಜ್ಯದ ಹಲವು ನ್ಯಾಯಾಲಯಗಳಲ್ಲಿ, ಪ್ರಮುಖವಾಗಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಪ್ರಸ್ತುತ ಚಾಲ್ತಿಯಲ್ಲಿರುವ ಒಳನಾಡು ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕಿನ ನಿಯಮಗಳನ್ನು ಹಾಗೂ ಗುತ್ತಿಗೆ ಆದೇಶಗಳನ್ನು ಪ್ರಶ್ನಿಸಿ ದಾವೆಗಳು ದಾಖಲಾಗಿದ್ದು, ಈ ದಾವೆಗಳಲ್ಲಿ ನೀಡಿದ ತೀರ್ಪಿನ ಹಿನ್ನೆಲೆಯಲ್ಲಿ ಚಾಲ್ತಿಯಲ್ಲಿರುವ ಮೀನು ಪಾಶುವಾರು ಹಕ್ಕಿನ ವಿಲೇವಾರಿ ನಿಯಮಗಳನ್ನು ಪರಿಷ್ಕರಿಸುವುದು ಅಗತ್ಯವೆಂದು ಸರ್ಕಾರವು ಮನಗಂಡಿರುತ್ತದೆ.

ಆದುದರಿಂದ, ರಾಜ್ಯದ ಸರ್ಕಾರಿ ಸ್ವಾಮ್ಯದ ಎಲ್ಲಾ ಒಳನಾಡು ಜಲಸಂಪನ್ಮೂಲಗಳಲ್ಲಿ ಮೀನು ಉತ್ಪಾದನೆಯನ್ನು ಗರಿಷ್ಟ ಪ್ರಮಾಣಕ್ಕೇರಿಸುವ, ಮೀನು ಕೃಷಿಯನ್ನು ಜೀವನಾಧಾರವಾಗಿ ಅವಲಂಬಿಸಿರುವ ಒಳನಾಡು ಮೀನುಗಾರರಿಗೆ ಸ್ವಯಂ ಉದ್ಯೋಗವನ್ನು ಕಲ್ಪಿಸಿಕೊಡುವುದರ ಮುಖಾಂತರ ಅವರ ಸಾಮಾಜಿಕ ಮತ್ತು ಆರ್ಥಿಕ ಸಬಲೀಕರಣಕ್ಕೆ ಒತ್ತು ನೀಡುವ ಹಾಗೂ ಚಾಲ್ತಿಯಲ್ಲಿರುವ ಗುತ್ತಿಗೆ ನಿಯಮಾವಳಿಗಳಲ್ಲಿರುವ ನ್ಯೂನ್ಯತೆಗಳನ್ನು ಸರಿಪಡಿಸಿ ಮತ್ತು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ತೀರ್ಪಿನ ಅಂಶಗಳನ್ನು ಅಳವಡಿಸಿಕೊಂಡು ಸಮಗ್ರವಾದ ಒಳನಾಡು ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕಿನ ವಿಲೇವಾರಿ ನಿಯಮಾವಳಿಗಳನ್ನು ರೂಪಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

ಆದೇಶ ಸಂಖ್ಯೆ:ಪಸಂಮೀ 125 ಮೀಇಇ 2013, ಬೆಂಗಳೂರು ದಿನಾಂಕ:21-02-2014

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಮೀನುಗಾರಿಕೆ ಇಲಾಖೆಯ / ಅರಣ್ಯ ಇಲಾಖೆಯ / ಗ್ರಾಮ ಪಂಚಾಯತ್‌ಗಳ / ಜಲಸಂವರ್ಧನೆ ಯೋಜನಾ ಸಂಘದ / ಕೆರೆ ಅಭಿವೃದ್ಧಿ ಪ್ರಾಧಿಕಾರದ / ಇತರೆ ಇಲಾಖೆಗಳ / ಪ್ರಾಧಿಕಾರಗಳ / ಸರ್ಕಾರಿ ಸ್ವಾಮ್ಯದ ಸಂಸ್ಥೆಗಳ ವ್ಯಾಪ್ತಿಯಲ್ಲಿನ ಹಾಗೂ ಸರ್ಕಾರಿ ಸ್ವಾಮ್ಯದ ಒಳನಾಡು ಜಲಸಂಪನ್ಮೂಲಗಳಾದ ಜಲಾಶಯಗಳ / ಕೆರೆಗಳ / ಕೊಳಗಳ / ನದಿಗಳ / ತೊರೆಗಳ / ಅಳಿವೆಗಳ ಇತ್ಯಾದಿ ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕಿನ ವಿಲೇವಾರಿಗೆ ಸಂಬಂಧಪಟ್ಟಂತೆ ಹೊರಡಿಸಲಾಗಿದ್ದ ದಿನಾಂಕ:28-01-2006ರ ಆದೇಶ ಸಂಖ್ಯೆ:ಪಸಂಮೀ/167/ಮೀಇಇ/2005 ವನ್ನು ರದ್ದುಪಡಿಸಿ ಮೀನುಗಾರಿಕಾ ಜಲಸಂಪನ್ಮೂಲಗಳ ವಿಲೇವಾರಿ ಕಾರ್ಯನೀತಿ-2014ಕ್ಕೆ ಅನುಮೋದನೆ ನೀಡಲಾಗಿದೆ ಹಾಗೂ ಈ ಕಾರ್ಯನೀತಿಯು 2014-15ನೇ ಸಾಲಿನ ಮೀನುಗಾರಿಕಾ ಫಸಲಿ ವರ್ಷದಿಂದ ಮುಂದಿನ ಆದೇಶದವರೆಗೆ ಈ ಕೆಳಕಂಡ ಸಮಗ್ರವಾದ ಒಳನಾಡು ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕಿನ ವಿಲೇವಾರಿ ನಿಯಮಗಳನ್ನು ಜಾರಿಗೊಳಿಸಿ ಆದೇಶಿಸಿದೆ.

ಕಂಡಿಕೆ-1:-

ಸರ್ಕಾರಿ ಸ್ವಾಮ್ಯದ ಜಲಸಂಪನ್ಮೂಲಗಳ ಒಡೆತನವು ಯಾವುದೇ ಇಲಾಖೆಯ / ಪ್ರಾಧಿಕಾರದ / ಸರ್ಕಾರಿ ಸ್ವಾಮ್ಯದ ಸಂಸ್ಥೆಯ ವ್ಯಾಪ್ತಿಗೆ ಒಳಪಟ್ಟಿದ್ದರೂ ಕೂಡ, ಅಂತಹ ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕಿನ ವಿಲೇವಾರಿಯ ವಿಷಯವು ಮೀನುಗಾರಿಕೆ ಇಲಾಖೆಯ ವ್ಯಾಪ್ತಿಗೆ ಒಳಪಟ್ಟಿರುತ್ತದೆ.

ಕಂಡಿಕೆ-2:-

ಸರ್ಕಾರವು ಈ ಹಿಂದೆ ಹೊರಡಿಸಿದ್ದ ಸಂಖ್ಯೆ:ಪಸಂಮೀ/167/ಮೀಇಇ/2005, ದಿನಾಂಕ: 28-01-2006ರ ಆದೇಶದಲ್ಲಿನ ವಿಲೇವಾರಿ ನಿಯಮಗಳ ಪ್ರಕಾರ ವಿಲೇವಾರಿಯಾದ ಎಲ್ಲಾ ಜಲಸಂಪನ್ಮೂಲಗಳ ವಿಲೇವಾರಿ ಅವಧಿ ಮುಗಿದನಂತರ ಆ ಜಲಸಂಪನ್ಮೂಲಗಳಿಗೆ ಸಂಬಂಧಿಸಿದಂತೆ ಈ ಆದೇಶ ಜಾರಿಗೆ ಬರುತ್ತದೆ.

ಕಂಡಿಕೆ-3:-

ಒಳನಾಡು ಜಲಸಂಪನ್ಮೂಲಗಳ ವರ್ಗೀಕರಣ

I) ಕೆರೆಗಳ ವರ್ಗೀಕರಣ:

(1) ಮೀನುಗಾರಿಕೆ ಇಲಾಖಾ ವ್ಯಾಪ್ತಿಯ ಕೆರೆಗಳು:-

ಅ) 40 ಹೆಕ್ಟೇರ್‌ಗಿಂತ ಹೆಚ್ಚು ಅಚ್ಚುಕಟ್ಟು ಪ್ರದೇಶವುಳ್ಳ ಸರ್ಕಾರಿ ಸ್ವಾಮ್ಯದ ಎಲ್ಲಾ ಜಲಸಂಪನ್ಮೂಲಗಳು.

ಆ) ಗ್ರಾಮಪಂಚಾಯಿತಿಗಳಿಲ್ಲದ ಪಟ್ಟಣ ಪಂಚಾಯಿತಿ, ಪುರಸಭೆ, ನಗರಸಭೆ, ನಗರಪಾಲಿಕೆ, ಮಹಾನಗರಪಾಲಿಕೆ ಇತ್ಯಾದಿ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯ 40 ಹೆಕ್ಟೇರ್‌ಗಿಂತ ಕಡಿಮೆ ಅಚ್ಚುಕಟ್ಟು ಪ್ರದೇಶದವರೆಗಿನ ಸರ್ಕಾರಿ ಸ್ವಾಮ್ಯದ ಎಲ್ಲಾ ಜಲಸಂಪನ್ಮೂಲಗಳು.

(2) ಗ್ರಾಮಪಂಚಾಯತಿ ವ್ಯಾಪ್ತಿಯ ಕೆರೆಗಳು:-

40 ಹೆಕ್ಟೇರ್ ಅಚ್ಚುಕಟ್ಟು ಪ್ರದೇಶದವರೆಗಿನ ಸರ್ಕಾರಿ ಸ್ವಾಮ್ಯದ ಜಲಸಂಪನ್ಮೂಲಗಳು (ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಆದೇಶ ಸಂ.ಗ್ರಾಅಪ 165 ಜಿಪಸ 2002 ದಿನಾಂಕ 01/03/2004 ಮತ್ತು 05/04/2004ರಲ್ಲಿ 40 ಹೆಕ್ಟೇರ್ ಅಚ್ಚುಕಟ್ಟು ಪ್ರದೇಶದವರೆಗಿನ ಸರ್ಕಾರಿ ಸ್ವಾಮ್ಯದ ಜಲಸಂಪನ್ಮೂಲಗಳ ಮೀನುಗಾರಿಕೆ ಅಭಿವೃದ್ಧಿ ಮತ್ತು ಮೀನು ಪಾಶುವಾರು ಹಕ್ಕು ವಿಲೇವಾರಿಯನ್ನು ಗ್ರಾಮಪಂಚಾಯತಿಗಳಿಗೆ ನೀಡಿ ಸರ್ಕಾರವು ಆದೇಶಿಸಿರುವುದನುಸಾರ).

II) ಜಲಾಶಯಗಳ ವರ್ಗೀಕರಣ:-

(1) ಸಣ್ಣ ಜಲಾಶಯಗಳು (1000 ಹೆಕ್ಟೇರ್ ಜಲವಿಸ್ತೀರ್ಣಕ್ಕಿಂತ ಕಡಿಮೆ ಜಲವಿಸ್ತೀರ್ಣ ಹೊಂದಿರುವ ಜಲಾಶಯಗಳು).

(2) ಮಧ್ಯಮ ಜಲಾಶಯಗಳು (1001 ರಿಂದ 5000 ಹೆಕ್ಟೇರ್ ಜಲವಿಸ್ತೀರ್ಣ ಹೊಂದಿರುವ ಜಲಾಶಯಗಳು)

(3) ದೊಡ್ಡ ಜಲಾಶಯಗಳು (5001 ಹೆಕ್ಟೇರ್ ಜಲವಿಸ್ತೀರ್ಣಕ್ಕಿಂತ ಮೇಲ್ಪಟ್ಟ ಜಲಾಶಯಗಳು)

III) ನದಿ ಭಾಗ:-

1) ನದಿಯ 25 ಕಿ.ಮೀ. ಉದ್ದದ ಭಾಗ ಅಥವಾ ಆ ತಾಲ್ಲೂಕಿನ ಗಡಿಯೊಳಗೆ ಬರುವ 25 ಕಿ.ಮೀ. ಗಿಂತ ಕಡಿಮೆ ಇರುವ ಭಾಗ.

IV) ಅಳಿವೆಗಳು:-

ಕಂಡಿಕೆ-4:-

ವಿಲೇವಾರಿ ವಿಧಾನಗಳು

1) ಗುತ್ತಿಗೆ:-

(ಅ) ಜಲಸಂಪನ್ಮೂಲಗಳನ್ನು <u>ಮೊದಲು ಅರ್ಹ ಮೀನುಗಾರರ ಸಹಕಾರ ಸಂಘಗಳಿಂದ ಅರ್ಜಿಗಳನ್ನು ಆಹ್ವಾನಿಸಿ ಗರಿಷ್ಠ 5 ವರ್ಷಗಳ ಅವಧಿಗೆ ಗುತ್ತಿಗೆಗೆ ನೀಡಲಾಗುವುದು</u>. ಅರ್ಜಿ ಸಲ್ಲಿಸಿದ ಮೀನುಗಾರರ ಸಹಕಾರ ಸಂಘಗಳು ಈ ಆದೇಶದ <u>ಅನುಬಂಧ-1ರಲ್ಲಿ</u> ನಮೂದಿಸಿರುವ ಅರ್ಹತೆಗಳನ್ನು ಹೊಂದಿರಬೇಕು ಹಾಗೂ ದಾಖಲಾತಿಗಳನ್ನು ಸಲ್ಲಿಸಬೇಕು.

(ಆ) ಪ್ರತಿ ಅರ್ಹ ಮೀನುಗಾರರ ಸಹಕಾರ ಸಂಘಕ್ಕೆ, ಆ ಸಂಘದ ಬೈಲಾ ಪ್ರಕಾರ, ಅದರ ಕಾರ್ಯ ವ್ಯಾಪ್ತಿಯಲ್ಲಿ ಗರಿಷ್ಠ 300 ಹೆಕ್ಟೇರ್ ಜಲವಿಸ್ತೀರ್ಣಕ್ಕೆ ಮೀರದಂತೆ ಗರಿಷ್ಠ ಎರಡು ಕೆರೆ ಅಥವಾ ಈ ಆದೇಶದ <u>ಅನುಬಂಧ-2 ರಲ್ಲಿ</u> ಪಟ್ಟಿ ಮಾಡಿರುವ ಗರಿಷ್ಠ ಒಂದು ಜಲಾಶಯದ ಅಥವಾ

| ಕ್ರ.ಸಂ | ಕಾಮಗಾರಿಯ ಹೆಸರು | 2017-18ನೇ ಸಾಲಿನ ಅನುದಾನ (ರೂ.ಲಕ್ಷಗಳಲ್ಲಿ) |
|---|---|---|
| 12 | ಮದ್ಯಪದವಿನಿಂದ-ಪೆಡ್ಡಿಯಂಗಡಿ ರಸ್ತೆಯ ಕಿ.ಮೀ.0.00 ರಿಂದ 2.30 .ರವರೆಗೆ ಪ್ಯಾಚ್ ದುರಸ್ತಿ , ಜಂಗಲ್ ಕಟ್ಟಿಂಗ್ ಹಾಗೂ ನಿರ್ವಹಣೆ | 1.61 |
| 13 | ಮಂಗಳೂರು ಉತ್ತರ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಲೋಕೋಪಯೋಗಿ ಇಲಾಖೆಯ ಜಿಲ್ಲಾ ಮುಖ್ಯ ರಸ್ತೆಗಳಲ್ಲಿ ರಸ್ತೆ ಸುರಕ್ಷತಾ ಕ್ರಮ ಒದಗಿಸುವ ಬಗ್ಗೆ. | 4.00 |
| 14 | ಮಂಗಳೂರು ತಾಲೂಕಿನ ಮರವೂರು-ಅದ್ಯಪಾಡಿ-ಉಣಿಲೆ-ಕಂದಾವರ ರಸ್ತೆಯ ಕಿ.ಮೀ.0.60 ರಲ್ಲಿ ಬದಿಗೆ ಕುಸಿದಿರುವ ಭಾಗಕ್ಕೆ ತಡೆಗೋಡೆ ನಿರ್ಮಾಣ. | 4.00 |
| 15 | ಮಂಗಳೂರು ತಾಲೂಕಿನ ವಾಮಂಜೂರು-ಪೆರ್ಮಂಕಿಪದವು ರಸ್ತೆಯ ಕಿ.ಮೀ.5.90ರಿಂದ 6.00 ರವರೆಗೆ ಆರ್.ಸಿ.ಸಿ ವರಂಡಿ ನಿರ್ಮಾಣ. | 3.00 |
| 16 | ಮಂಗಳೂರು ತಾಲೂಕಿನ ಎಡಪದವು-ಕುಪ್ಪೆಪದವು-ಆರ್ಲಸೊರ್ನಾಡ್ ರಸ್ತೆಯ ಕಿ.ಮೀ.4.00 ರಿಂದ 6.50ರವರೆಗೆ ಪ್ಯಾಚ್ ದುರಸ್ತಿ , ಜಂಗಲ್ ಕಟ್ಟಿಂಗ್ ಹಾಗೂ ನಿರ್ವಹಣೆ | 1.75 |
| 17 | ಮಂಗಳೂರು ತಾಲೂಕಿನ ಬೈತುರ್ಲಿ-ನೀರ್‌ಮಾರ್ಗ-ಕಲ್ಪನೆ ರಸ್ತೆಯ ಕಿ.ಮೀ.5.00 ರಿಂದ 11.60ರ ವರೆಗೆ ಪ್ಯಾಚ್ ದುರಸ್ತಿ , ಜಂಗಲ್ ಕಟ್ಟಿಂಗ್ ಹಾಗೂ ನಿರ್ವಹಣೆ | 4.62 |
| 18 | ಮಂಗಳೂರು ತಾಲೂಕಿನ ನೀರ್‌ಮಾರ್ಗ-ಅಡ್ಯಾರ್ ಪದವು-ಅರ್ಕುಳ ರಸ್ತೆಯ ಕಿ.ಮೀ.4.00 ರಿಂದ 6.50ರವರೆಗೆ ಪ್ಯಾಚ್ ದುರಸ್ತಿ , ಜಂಗಲ್ ಕಟ್ಟಿಂಗ್ ಹಾಗೂ ನಿರ್ವಹಣೆ | 1.75 |
| 19 | ಮಂಗಳೂರು ತಾಲೂಕಿನ ವಾಮಂಜೂರು-ಪೆರ್ಮಂಕಿಪದವು ರಸ್ತೆಯ ಕಿ.ಮೀ.5.00 ರಿಂದ 7.00 ರವರೆಗೆ ಪ್ಯಾಚ್ ದುರಸ್ತಿ , ಜಂಗಲ್ ಕಟ್ಟಿಂಗ್ ಹಾಗೂ ನಿರ್ವಹಣೆ | 1.40 |
| 20 | ಮಂಗಳೂರು ತಾಲೂಕಿನ ಎಡಪದವು-ಮೂಪಾಡಿಕಲ್ಲು-ಬೆಳ್ಳಿಚಾರು ರಸ್ತೆಯ ಕಿ.ಮೀ.0.00 ರಿಂದ 5.00 ರವರೆಗೆ ಪ್ಯಾಚ್ ದುರಸ್ತಿ , ಜಂಗಲ್ ಕಟ್ಟಿಂಗ್ ಹಾಗೂ ನಿರ್ವಹಣೆ | 3.50 |
| | | |
| | ಒಟ್ಟು | 60.48 |
| | **ಲೆಕ್ಕಶೀರ್ಷಿಕೆ:-3054-04-337-01-09-172 ಸಿ.ಎಂ.ಜಿ.ಆರ್.ವೈ.** | |
| 1 | ಮಂಗಳೂರು ತಾಲೂಕಿನ ಬೈತುರ್ಲಿ-ನೀರ್‌ಮಾರ್ಗ-ಕಲ್ಪನೆ ಜಿಲ್ಲಾ ಮುಖ್ಯ ರಸ್ತೆಯ ಕಿ.ಮೀ.4.00 ರಿಂದ 5.00ರವರೆಗೆ ನವೀಕರಣ | 20.00 |
| 2 | ಮಂಗಳೂರು ತಾಲೂಕಿನ ವಾಮಂಜೂರು-ಪೆರ್ಮಂಕಿಪದವು ಜಿಲ್ಲಾ ಮುಖ್ಯ ರಸ್ತೆಯ ಕಿ.ಮೀ.4.00 ರಿಂದ 5.00ರವರೆಗೆ ನವೀಕರಣ | 10.00 |
| | | |
| | ಒಟ್ಟು | 30.00 |
| | ಒಟ್ಟು ಮೊತ್ತ | 120.48 |

ಕರ್ನಾಟಕ ಸರ್ಕಾರ

ಸಂಖ್ಯೆ: ಲೋಇ 09 ಸಿಕ್ಯೂಎನ್ 2020(ಇ)

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 06/03/2020

70
U/S
09/03/2020

**ಇವರಿಂದ,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ,**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ, ಬೆಂಗಳೂರು.

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ (ಬೈಲಹೊಂಗಲ), ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 913 ಕ್ಕೆ ಉತ್ತರಿಸುವ ಕುರಿತು.

ಉಲ್ಲೇಖ: ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.913/2020, ದಿನಾಂಕ 27.02.2020

********

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ (ಬೈಲಹೊಂಗಲ), ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 913 ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿದೆ ಹಾಗೂ ಸದರಿ ಉತ್ತರದ soft copy ಅನ್ನು dsqb-kla-kar@nic.in ಇ-ಮೇಲ್ ವಿಳಾಸಕ್ಕೆ ಮೇಲ್ ಕಳುಹಿಸಲಾಗಿದೆ ಎಂದು ತಮಗೆ ತಿಳಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಸಿದ್ದಪ್ಪ ಚಂದ್ರಶೇಖರ ಮರ್ತೂರ)
ಶಾಖಾಧಿಕಾರಿ
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸಂಪರ್ಕ-1).

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 913 |
| ಸದಸ್ಯರ ಹೆಸರು | : | ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ (ಬೈಲಹೊಂಗಲ) |
| ಉತ್ತರಿಸುವ ದಿನಾಂಕ | : | 09-03-2020 |
| ಉತ್ತರಿಸುವ ಸಚಿವರು | : | ಉಪ ಮುಖ್ಯ ಮಂತ್ರಿಗಳು, ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಇಲಾಖೆ |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೈಲಹೊಂಗಲ ತಾಲೂಕಿನ ಬೆಳವಡಿ ಕ್ರಾಸ್‌ನಿಂದ ಬಿದರಗಡ್ಡಿವರೆಗಿನ ರಸ್ತೆ ಸಂಪೂರ್ಣವಾಗಿ ಹಾಳಾಗಿ ಸಾರ್ವಜನಿಕರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸದರಿ ರಸ್ತೆಯು ಜಿಲ್ಲಾ ಮುಖ್ಯ ರಸ್ತೆಯಾಗಿದ್ದು, ರಸ್ತೆಯ ಒಟ್ಟು 8.10 ಕಿಮೀ ಉದ್ದ ಇರುತ್ತದೆ. ಸದರಿ ರಸ್ತೆಯ ಹಲವು ಭಾಗಗಳು ಪ್ರಸಕ್ತ ಸಾಲಿನಲ್ಲಿ ಅತೀವೃಷ್ಟಿಯಿಂದಾಗಿ ಹಾಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ |
| ಆ) | ಹಾಗಿದ್ದಲ್ಲಿ, ಸದರಿ ರಸ್ತೆಯನ್ನು ಅಭಿವೃದ್ಧಿಪಡಿಸಲು ಸರ್ಕಾರ ಕೈಗೊಂಡ ಕ್ರಮಗಳೇನು? | ಸದರಿ ರಸ್ತೆಯ ಕಿಮೀ 1.35 ರಿಂದ 2.715 ರವರೆಗೆ ಹಾಳಾದ ಭಾಗವನ್ನು ಪ್ರಸಕ್ತ ಸಾಲಿನ ಲೆಕ್ಕ ಶೀರ್ಷಿಕೆ 3054-ಮುಖ್ಯ ಮಂತ್ರಿಗಳ ಗ್ರಾಮೀಣ ರಸ್ತೆ ಅಭಿವೃದ್ಧಿ ನಿಧಿ ಅಡಿಯಲ್ಲಿ ರೂ.41.15 ಲಕ್ಷ ಅಂದಾಜು ಮೊತ್ತದಲ್ಲಿ ಅಭಿವೃದ್ಧಿಪಡಿಸಲಾಗುತ್ತಿದ್ದು, ಕಾಮಗಾರಿ ಪ್ರಗತಿಯಲ್ಲಿದೆ. ಈ ರಸ್ತೆಯ ಉಳಿದ ಭಾಗಗಳನ್ನು ಪ್ರಸಕ್ತ ಸಾಲಿನ ವಾರ್ಷಿಕ ನಿರ್ವಹಣೆಯಲ್ಲಿ ತಗ್ಗು ಗುಂಡಿಗಳನ್ನು ತುಂಬಿ ಸುಗಮ ವಾಹನ ಸಂಚಾರಕ್ಕೆ ಅನುವು ಮಾಡಲಾಗಿದೆ. |

ಲೋಇ 09 ಸಿಕ್ಯೂಎಸ್ 2020(ಇ)

(ಗೋವಿಂದ ಎಂ. ಕಾರಜೋಳ)
ಉಪ ಮುಖ್ಯ ಮಂತ್ರಿಗಳು,
ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಇಲಾಖೆ

Unstd 915

ಕರ್ನಾಟಕ ಸರ್ಕಾರ

ಸಂಖ್ಯೆ: ಲೋಇ 11 ಸಿಕ್ಯೂಎನ್ 2020(ಇ)

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 06/03/2020

72
U/S
09/03/2020

**ಇವರಿಂದ,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ,**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ, ಬೆಂಗಳೂರು.

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ (ಬೈಲಹೊಂಗಲ), ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 915 ಕ್ಕೆ ಉತ್ತರಿಸುವ ಕುರಿತು.

ಉಲ್ಲೇಖ: ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.915/2020, ದಿನಾಂಕ 27.02.2020

********

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ (ಬೈಲಹೊಂಗಲ), ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 915 ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿದೆ ಹಾಗೂ ಸದರಿ ಉತ್ತರದ soft copy ಅನ್ನು dsqb-kla-kar@nic.in ಇ–ಮೇಲ್ ವಿಳಾಸಕ್ಕೆ ಮೇಲ್ ಕಳುಹಿಸಲಾಗಿದೆ ಎಂದು ತಮಗೆ ತಿಳಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಸಿದ್ದಪ್ಪ ಚಂದ್ರಶೇಖರ ಮರ್ತುರ)
ಶಾಖಾಧಿಕಾರಿ
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸಂಪರ್ಕ–1).

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 915 |
| ಸದಸ್ಯರ ಹೆಸರು | : | ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ (ಬೈಲಹೊಂಗಲ) |
| ಉತ್ತರಿಸುವ ದಿನಾಂಕ | : | 09-03-2020 |
| ಉತ್ತರಿಸುವ ಸಚಿವರು | : | ಉಪ ಮುಖ್ಯ ಮಂತ್ರಿಗಳು, ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಇಲಾಖೆ |

| ಕ್ರ.ಸಂ | ಪ್ರಶ್ನೆ | ಉತ್ತರಗಳು |
|---|---|---|
| ಅ) | ಬೈಲಹೊಂಗಲ ಮತಕ್ಷೇತ್ರದ ಬೆಳವಡಿಯಿಂದ ವ್ಹಾಯಾ ಬುಡರಕಟ್ಟಿ ಬೈಲಹೊಂಗಲ ಗಡಿವರೆಗೆ ಅತಿವೃಷ್ಟಿಯಿಂದ ರಸ್ತೆಯು ಸಂಪೂರ್ಣವಾಗಿ ಹಾಳಾಗಿ ಸಾರ್ವಜನಿಕರಿಗೆ ತೊಂದರೆಯುಂಟಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಸರ್ಕಾರದ ಗಮನಕ್ಕೆ ಬಂದಿದೆ. |
| ಆ) | ಬಂದಿದ್ದಲ್ಲಿ, ಸದರಿ ರಸ್ತೆಯನ್ನು ಸಂಪೂರ್ಣವಾಗಿ ಅಭಿವೃದ್ಧಿಪಡಿಸಲು ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | ಬೆಳವಡಿಯಿಂದ ವ್ಹಾಯಾ ಬುಡರಕಟ್ಟಿ ಬೈಲಹೊಂಗಲ ಗಡಿಯವರೆಗೆ ಕಿ.ಮೀ. 194.17 ರಿಂದ 204.16 ರವರೆಗೆ 9.99 ಕಿಮೀ ಉದ್ದವಿದ್ದು, ಇದು ಮಂಗಸೂಳಿ ಲಕ್ಷೇಶ್ವರ ರಾಜ್ಯ ಹೆದ್ದಾರಿ-73 ರ ಭಾಗವಾಗಿರುತ್ತದೆ.<br>ಜಿರಾದ ಸದಾಶಿವಗಡ ರಾಜ್ಯ ಹೆದ್ದಾರಿ-34 ರ ಚೈ.520.89 ರಲ್ಲಿ ಇರುವ ಸೇತುವೆಯು ಆಗಸ್ಟ್-2019 ರ ಅತೀವೃಷ್ಟಿ/ಪ್ರವಾಹದಿಂದಾಗಿ ಹಾಳಾಗಿದ್ದು, ವಾಹನ ಸಂಚಾರಕ್ಕೆ ಅಡಚಣೆಯಾಗಿದ್ದರಿಂದ, ಸದರಿ ರಸ್ತೆಗೆ ಪರ್ಯಾಯವಾಗಿ ಬೆಳವಡಿ, ಬುಡರಕಟ್ಟಿ, ಬೈಲಹೊಂಗಲ ಹತ್ತಿರ ಮಂಗಸೂಳಿ ಲಕ್ಷೇಶ್ವರ ರಾಜ್ಯ ಹೆದ್ದಾರಿ-73 ಅನ್ನು ಬಳಸುತ್ತಿರುವುದರಿಂದ, ಸದರಿ ರಸ್ತೆಯ ಮೇಲೆ ಅತೀ ಹೆಚ್ಚಿನ ವಾಹನ ಸಂಚಾರದಿಂದ ರಸ್ತೆಯು ಹಾಳಾಗಿರುತ್ತದೆ.<br>ಪ್ರಸಕ್ತ ಸಾಲಿನಲ್ಲಿ ಸದರಿ ರಸ್ತೆಯ ನಿರ್ವಹಣೆಗಾಗಿ ರೂ.3.00 ಲಕ್ಷ ಬಿಡುಗಡೆ ಮಾಡಿದ್ದು, ವಾಹನ ಸಂಚಾರಕ್ಕೆ ಅನುವು ಮಾಡಿಕೊಡಲಾಗಿದೆ.<br>ಅನುದಾನ ಲಭ್ಯತೆಯಂತೆ ಹಾಳಾದ ಭಾಗವನ್ನು ಅಭಿವೃದ್ಧಿಪಡಿಸಲು ಕ್ರಮ ಕೈಗೊಳ್ಳಲಾಗುವುದು. |

ಲೋಇ 11 ಸಿಕ್ಯೂಎನ್ 2020(ಇ)

(ಗೋವಿಂದ ಎಂ.ಕಾರಜೋಳ)
ಉಪ ಮುಖ್ಯ ಮಂತ್ರಿಗಳು,
ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಇಲಾಖೆ

U/S 739

ಕರ್ನಾಟಕ ಸರ್ಕಾರ

ಸಂಖ್ಯೆ: ಲೋಇ 07 ಸಿಕ್ಯೂಎನ್ 2020(ಇ)

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 06/03/2020

47
U/S
09/03/2020

**ಇವರಿಂದ,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ,**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ, ಬೆಂಗಳೂರು.

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 739 ಕ್ಕೆ ಉತ್ತರಿಸುವ ಕುರಿತು.

ಉಲ್ಲೇಖ: ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.739/2020, ದಿನಾಂಕ 27.02.2020

********

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು), ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 739 ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿದೆ ಹಾಗೂ ಸದರಿ ಉತ್ತರದ soft copy ಅನ್ನು dsqb-kla-kar@nic.in ಇ-ಮೇಲ್ ವಿಳಾಸಕ್ಕೆ ಮೇಲ್ ಕಳುಹಿಸಲಾಗಿದೆ ಎಂದು ತಮಗೆ ತಿಳಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಸಿದ್ದಪ್ಪ ಚಂದ್ರಶೇಖರ ಮರ್ತುರ)
ಶಾಖಾಧಿಕಾರಿ
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸಂಪರ್ಕ-1).

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 739 |
| ಸದಸ್ಯರ ಹೆಸರು | : | ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು) |
| ಉತ್ತರಿಸುವ ದಿನಾಂಕ | : | 09-03-2020 |
| ಉತ್ತರಿಸುವ ಸಚಿವರು | : | ಉಪ ಮುಖ್ಯ ಮಂತ್ರಿಗಳು, ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಇಲಾಖೆ |

| ಕ್ರಸಂ | ಪ್ರಶ್ನೆ | ಉತ್ತರಗಳು |
|---|---|---|
| ಅ) | ಪ್ರಸ್ತುತ ಲೋಕೋಪಯೋಗಿ ಇಲಾಖೆಯಿಂದ ಗ್ರಾಮೀಣ ಮತ್ತು ಜಿಲ್ಲಾ ರಸ್ತೆಗಳನ್ನು ಮೇಲ್ದರ್ಜೆಗೇರಿಸುವ ಮಾನದಂಡಗಳೇನು; | ಸರ್ಕಾರದ ಆದೇಶ ಸಂಖ್ಯೆ: ಲೋಇ 615 ಸಿಆರ್‌ಎಂ 2010, ದಿನಾಂಕ 21-04-2010 ರಲ್ಲಿ ರಾಜ್ಯದಲ್ಲಿನ ರಸ್ತೆಗಳನ್ನು ಮೇಲ್ದರ್ಜೆಗೇರಿಸಲು/ಕೆಳದರ್ಜೆಗಿಳಿಸುವ ಪ್ರಸ್ತಾವನೆಗಳ ಕುರಿತು ಮಾರ್ಗಸೂಚಿಗಳನ್ನು ನೀಡಲಾಗಿರುತ್ತದೆ.<br>(ಆದೇಶವನ್ನು ಅನುಬಂಧರಲ್ಲಿ ನೀಡಲಾಗಿದೆ). |
| ಆ) | ರಾಜ್ಯದ ಗ್ರಾಮೀಣ ಮತ್ತು ಜಿಲ್ಲಾ ರಸ್ತೆಗಳನ್ನು ಮೇಲ್ದರ್ಜೆಗೇರಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಹೌದು, |
| ಇ) | ಹಾಗಿದ್ದಲ್ಲಿ, ಕಿತ್ತೂರು ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯ ಎಷ್ಟು ಕಿ.ಮೀ ಗ್ರಾಮೀಣ ಮತ್ತು ಜಿಲ್ಲಾ ರಸ್ತೆಗಳನ್ನು ಮೇಲ್ದರ್ಜೆಗೇರಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ (ವಿವರ ನೀಡುವುದು)? | ಕಿತ್ತೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ 56.60 ಕಿ.ಮೀ ಉದ್ದದ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಹಾಗೂ 140.03 ಕಿ.ಮೀ ಉದ್ದದ ಜಿಲ್ಲಾ ಮುಖ್ಯ ರಸ್ತೆಯನ್ನು ರಾಜ್ಯ ಹೆದ್ದಾರಿಯನ್ನಾಗಿ ಮೇಲ್ದರ್ಜೆಗೇರಿಸಲು ಪ್ರಸ್ತಾವನೆ ಸ್ವೀಕೃತವಾಗಿದೆ. ಅವುಗಳ ವಿವರಗಳು ಈ ಕೆಳಗಿನಂತಿವೆ:-<br>**ಗ್ರಾಮೀಣ ರಸ್ತೆಯಿಂದ ಜಿಲ್ಲಾ ಮುಖ್ಯ ರಸ್ತೆಗೆ ಒಟ್ಟು 56.60 ಕಿ.ಮೀ**<br>1.NH4-M.K.Hubli-Veerapur-Amarapur-M.K.Hubli Road- 11.00 Km<br>2.NH4-Devarashigihalli-Ambadagatti-Bachchanakeri Road- 9.10 Km<br>3.Ugarkhod-Dematti-Chikkanandihalli to Alnavar-Betageri (SH-140) approach Road- 7.70 km<br>4.Alnavar-Betageri(SH-140) to Avaradi-Turakarashigihalli Road-6.10 km<br>5.Ningapur-Katridaddi-Galaginamad to Dharwad Border Road-6.60 km<br>6.NH4-Dombarakoppa road via Govt.Hospital-Mallapur KA-Chikkanandihalli-9.20 Km<br>7.Hanumanetti-Hiremele Road from via Bairanetti Hannikeri Road from Km 0.00 to 7.00 - 7.00 Km<br>**ಜಿಲ್ಲಾ ಮುಖ್ಯ ರಸ್ತೆಯಿಂದ ರಾಜ್ಯ ಹೆದ್ದಾರಿಗೆ 140.03 ಕಿ.ಮೀ (ಖಾನಾಪುರ, ಕಿತ್ತೂರು, ಬೈಲಹೊಂಗಲ, ಸವದತ್ತಿ ವಿಧಾನಸಭಾ ಕ್ಷೇತ್ರ ಸೇರಿ)**<br>1.Road from NH-4A (Kamta) to join SH-56 (Alagwadi) Via Kapoli-Bijarni-Bidi-Mugalihal-Gandigwad-Etagi-Ambadgatti-Hulikatti-Kotbagi-Dematti-Mallapur-Shivapur-Matchal-Budarkatti-Karikatti-Sangreshkopp-Saundatti-Yallammagudda-Hanchinal-140.03 Km. |

ಲೋಇ 07 ಸಿಕ್ಯೂಎನ್ 2020(ಇ)

(ಗೋವಿಂದ ಎಂ.ಕಾರಜೋಳ)
ಉಪ ಮುಖ್ಯ ಮಂತ್ರಿಗಳು,
ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಇಲಾಖೆ

ಅನುಬಂಧ-1

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ:- ರಾಜ್ಯದಲ್ಲಿನ ರಸ್ತೆಗಳನ್ನು ಮೇಲ್ದರ್ಜೆಗೇರಿಸುವ / ಕೆಳದರ್ಜೆಗಿಳಿಸುವ ಪ್ರಸ್ತಾವನೆಗಳ ಕುರಿತು ನೀತಿ ರಚನೆ ಹಾಗೂ ಮಾರ್ಗಸೂಚಿಗಳನ್ನು ತಯಾರಿಸುವ ಬಗ್ಗೆ.

---

**ಪ್ರಸ್ತಾವನೆ:**

ರಾಜ್ಯದಲ್ಲಿನ ರಸ್ತೆಗಳನ್ನು ಮೇಲ್ದರ್ಜೆಗೇರಿಸುವ/ಕೆಳದರ್ಜೆಗಿಳಿಸುವ ಪ್ರಸ್ತಾವನೆಗಳ ಕುರಿತು ನೀತಿ ರಚನೆ ಹಾಗೂ ಮಾರ್ಗಸೂಚಿಗಳನ್ನು ತಯಾರಿಸುವ ಬಗ್ಗೆ ಆರ್ಥಿಕ ಇಲಾಖೆ ಹಾಗೂ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಸಹಮತಿಯೊಂದಿಗೆ ಪರಿಶೀಲಿಸಲಾಗಿದೆ.

1. ಪ್ರಸ್ತುತ ಕರ್ನಾಟಕ ರಾಜ್ಯದಲ್ಲಿ ಒಟ್ಟು ಇರುವ ರಸ್ತೆಗಳ ವಿವರ ಈ ಕೆಳಕಂಡಂತೆ ಇರುತ್ತದೆ. (ಈಗಿರುವಂತೆ)

| | | |
|---|---|---|
| ರಾಷ್ಟ್ರೀಯ ಹೆದ್ದಾರಿಗಳು | - | 3,982 ಕಿ.ಮೀ |
| ರಾಜ್ಯ ಹೆದ್ದಾರಿಗಳು | - | 21,100 |
| ಜಿಲ್ಲಾ ಮುಖ್ಯ ರಸ್ತೆಗಳು | - | 51,862 |
| ಇತರೆ ಜಿಲ್ಲಾರಸ್ತೆಗಳು ಹಾಗೂ ಗ್ರಾಮೀಣ ರಸ್ತೆಗಳು | - | 1,47,200 |
| ಒಟ್ಟು | - | 2,24,144 ಕಿ.ಮೀ |

2. ಲೋಕೋಪಯೋಗಿ ಇಲಾಖೆಯು, ರಾಷ್ಟ್ರೀಯ ಹೆದ್ದಾರಿ, ರಾಜ್ಯ ಹೆದ್ದಾರಿ, ಜಿಲ್ಲಾ ಮುಖ್ಯ ರಸ್ತೆಗಳ ಉಸ್ತುವಾರಿಯನ್ನು ನೋಡಿಕೊಳ್ಳುತ್ತದೆ. ರಾಷ್ಟ್ರೀಯ ಹೆದ್ದಾರಿ ರಸ್ತೆಗಳನ್ನು ಭಾರತ ಸರ್ಕಾರದ ಅನುದಾನದಲ್ಲಿ ಅಭಿವೃದ್ಧಿ, ನಿರ್ವಹಣೆ ಮತ್ತು ದುರಸ್ತಿ ಮಾಡಲಾಗುತ್ತದೆ. ಅಂತೆಯೇ ರಾಜ್ಯ ಹೆದ್ದಾರಿ ಮತ್ತು ಜಿಲ್ಲಾ ಮುಖ್ಯ ರಸ್ತೆಗಳನ್ನು ರಾಜ್ಯ ಸರ್ಕಾರದ ಅನುದಾನದಲ್ಲಿ ಅಭಿವೃದ್ಧಿ, ನಿರ್ವಹಣೆ ಮತ್ತು ದುರಸ್ತಿ ಮಾಡಲಾಗುತ್ತದೆ. ಪ್ರಸ್ತುತದಲ್ಲಿ ಲೋಕೋಪಯೋಗಿ ಇಲಾಖೆಯ ಅಧೀನದಲ್ಲಿರುವ ರಾಜ್ಯ ಹೆದ್ದಾರಿ ಮತ್ತು ಜಿಲ್ಲಾ ಮುಖ್ಯ ರಸ್ತೆಗಳ ವಿವರ ಈ ಕೆಳಕಂಡಂತೆ ಇರುತ್ತದೆ. (ಈಗಿರುವಂತೆ)

| | ರಾಜ್ಯ ಹೆದ್ದಾರಿ | ಜಿಲ್ಲಾ ಮುಖ್ಯ ರಸ್ತೆ | ಒಟ್ಟು |
|---|---|---|---|
| ಉತ್ತರ ವಲಯ | 11,920 | 23,627 | 35,547 |
| ದಕ್ಷಿಣ ವಲಯ | 9,180 | 28,235 | 37,415 |
| ಒಟ್ಟು | 21,100 | 51,862 | 72,962 |

vi) ರಾಜ್ಯದಲ್ಲಿನ ರಸ್ತೆಗಳ ಬಗ್ಗೆ ಒಂದು ಶ್ವೇತ ಪತ್ರ ಹೊರಡಿಸುವುದು.

vii) ರಸ್ತೆಗಳನ್ನು ಮೇಲ್ದರ್ಜೆಗೇರಿಸುವ/ಕೆಳದರ್ಜೆಗೇರಿಸುವ ಪ್ರಸ್ತಾವನೆಗಳ ಬಗ್ಗೆ ಪರಿಶೀಲಿಸಲು ಸರ್ಕಾರದ ಮಟ್ಟದಲ್ಲಿ ಒಂದು ಸಮಿತಿಯನ್ನು ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇವರ ಅಧ್ಯಕ್ಷತೆಯಲ್ಲಿ ರಚಿಸಿ, ಈ ಸಮಿತಿಗೆ ಉಪಕಾರ್ಯದರ್ಶಿ, ಎ.ಡಿ.ಎನ್.ಕೋಶ ಇವರನ್ನು ಸಂಚಾಲಕರು/ಸದಸ್ಯರನ್ನಾಗಿ ನೇಮಿಸುವುದು. ಸದರಿ ಸಮಿತಿಯು ತಿಂಗಳಿಗೊಮ್ಮೆ ಸಭೆ ಸೇರುವುದು.

viii) ಮೇಲ್ದರ್ಜೆಗೇರಿಸುವ/ಕೆಳದರ್ಜೆಗೆ ಇಳಿಸುವ ಬಗ್ಗೆ ನೀತಿ ರಚನೆ/ಮಾರ್ಗಸೂಚಿಗಳಿಗೆ ಸಚಿವ ಸಂಪುಟದ ಅನುಮೋದನೆ ಪಡೆಯುವುದು.

4. ಬೇರೆ ರಾಜ್ಯಗಳೊಂದಿಗೆ ಹೋಲಿಕೆ:

| | ಕರ್ನಾಟಕ | ಆಂಧ್ರಪ್ರದೇಶ | ತಮಿಳುನಾಡು | ಮಹಾರಾಷ್ಟ್ರ |
|---|---|---|---|---|
| ರಾಷ್ಟ್ರೀಯ ಹೆದ್ದಾರಿಗಳು | 3,982 | 4,647 | 4,647 | 3,688 |
| ರಾಜ್ಯ ಹೆದ್ದಾರಿಗಳು | 21,100 | 10,231 | 9,259 | 33,212 |
| ಜಿಲ್ಲಾ ಮುಖ್ಯ ರಸ್ತೆಗಳು | 51,862 | 32,222 | 45,822 | 46,473 |
| ಇತರ ಜಿಲ್ಲಾರಸ್ತೆಗಳು ಹಾಗೂ ಗ್ರಾಮೀಣ ರಸ್ತೆಗಳು | 1,47,200 | 1,41,468 | 1,10,272 | 1,49,056 |
| ಒಟ್ಟು ರಸ್ತೆಗಳ ಉದ್ದ | 2,24,144 | 1,88,568 | 1,70,000 | 2,32,429 |

ಈ ರಾಜ್ಯದಲ್ಲಿ ಕೇವಲ 6,685 ಕಿಮೀ. (ಶೇಕಡಾ 8.80) ಉದ್ದವು ಮಾತ್ರ ದ್ವಿಪಥ ಹಾಗೂ ಮೇಲ್ಪಟ್ಟ ಅಗಲವುಳ್ಳ ರಸ್ತೆಯಾಗಿರುತ್ತದೆ ಮತ್ತು ಬೇರೆ ರಾಜ್ಯಗಳಿಗೆ ಹೋಲಿಸಿದರೆ ಈ ಉದ್ದವು ಬಹಳ ಕಡಿಮೆ ಇರುತ್ತದೆ.

ಈ ರಾಜ್ಯದ ಜಿಲ್ಲಾ ಮುಖ್ಯ ರಸ್ತೆಗಳ ಒಟ್ಟು ಉದ್ದ 51,852 ಕಿಮೀ. ಆಗಿದ್ದು, ಇದು ಆಂಧ್ರಪ್ರದೇಶ ಮತ್ತು ತಮಿಳುನಾಡು ರಾಜ್ಯಗಳಿಗೆ ಹೋಲಿಸಿದಾಗ ಹೆಚ್ಚಿಗೆ ಇರುತ್ತದೆ. ಆದರೆ ರಸ್ತೆಗಳನ್ನು ಸಾಮೂಹಿಕವಾಗಿ ಮೇಲ್ದರ್ಜೆಗೇರಿಸಲಾಗಿದ್ದು ಅಗತ್ಯ ಗುಣಮಟ್ಟಕ್ಕೆ ರಸ್ತೆಗಳನ್ನು ಅನುದಾನದ ಕೊರತೆಯಿಂದಾಗಿ ಅಭಿವೃದ್ಧಿಪಡಿಸಲಾಗಿರುವುದಿಲ್ಲ.

ಇದೇ ರೀತಿ ರಾಜ್ಯ ಹೆದ್ದಾರಿಗಳ ಉದ್ದವೂ ಸಹ ಈ ರಾಜ್ಯದಲ್ಲಿ ಇತರ ರಾಜ್ಯಗಳಿಗಿಂತ ಹೆಚ್ಚಿಗೆ ಇದ್ದು ಅಗತ್ಯ ಗುಣಮಟ್ಟಕ್ಕೆ ಅಭಿವೃದ್ಧಿಯಾಗಿರುವುದಿಲ್ಲ.

vi) ಆಯ್ಕೆ ಮಾಡಿದ ರಸ್ತೆಯು ರಾಷ್ಟ್ರೀಯ ಹೆದ್ದಾರಿ ಅಥವಾ ರಾಜ್ಯ ಹೆದ್ದಾರಿ ಅಥವಾ ಜಿಲ್ಲಾ ಮುಖ್ಯ ರಸ್ತೆಗಳಿಗೆ ಸಂಪರ್ಕ ಕಲ್ಪಿಸಬೇಕು.

vii) ಆಯ್ಕೆ ಮಾಡಿದ ರಸ್ತೆಯ ಅಗಲ (ಫಾರ್ಮೇಶನ್ ವಿಡ್ತ್) ಕನಿಷ್ಠ 9.00 ಮೀ. ಇರಬೇಕು.

viii) ಆಯ್ಕೆ ಮಾಡಿದ ರಸ್ತೆಯು Right of Way (ROW) ಕನಿಷ್ಠ 25.00 ಮೀಟರ್ ಇರಬೇಕು.

ix) ಆಯ್ಕೆ ಮಾಡಿದ ರಸ್ತೆಯು ತಾಲ್ಲೂಕು ಕೇಂದ್ರಗಳಿಗೆ, ಅಭಿವೃದ್ಧಿ ಕೇಂದ್ರಗಳಿಗೆ, ಪ್ರಮುಖ ಮಾರುಕಟ್ಟೆಗಳಿಗೆ (ಕೃಷಿ ಮತ್ತು ಫಲ ಮಾರುಕಟ್ಟೆಗಳು) ಹಾಗೂ ಪ್ರಾದೇಶಿಕ ಯಾತ್ರಾ ಸ್ಥಳಗಳು ಇತ್ಯಾದಿಗಳಿಗೆ ಸಂಪರ್ಕ ಕಲ್ಪಿಸಬೇಕು.

x) ಜಿಲ್ಲಾ "ಇತರೆ ಜಿಲ್ಲಾ ರಸ್ತೆ" ಗಳನ್ನು (ODRs) ಮೇಲ್ದರ್ಜೆಗೇರಿಸಲು ಮೇಲ್ಕಂಡ ಜಿಲ್ಲಾ ಅಂಶಗಳನ್ನು ಪರಿಗಣಿಸಿ ವಿವರ ಸಲ್ಲಿಸುವುದು.

xi) ಜಿಲ್ಲಾ ಮುಖ್ಯ ರಸ್ತೆಗಳನ್ನು ರಾಜ್ಯ ಹೆದ್ದಾರಿಗಳಾಗಿ ಮೇಲ್ದರ್ಜೆಗೇರಿಸಲು ರಸ್ತೆಯ ಫಾರ್ಮೇಶನ್ ವಿಡ್ತ್ ಕನಿಷ್ಠ 12 ಮೀಟರ್ ಇರಬೇಕು, Right of Way (ROW) ಕನಿಷ್ಠ 40 ಮೀಟರ್ ಇರಬೇಕು ಹಾಗೂ 2 ಜಿಲ್ಲಾ ಕೇಂದ್ರಗಳಿಗೆ ಸಂಪರ್ಕ ಕಲ್ಪಿಸುವಂತೆ ಇರಬೇಕು.

xii) ಡಾ:ನಂಜುಂಡಪ್ಪ ವರದಿಯ ಹಿನ್ನಲೆಯಲ್ಲಿ ಹಿಂದುಳಿದ / ಅತಿ ಹಿಂದುಳಿದ ತಾಲ್ಲೂಕುಗಳಲ್ಲಿ ಭೌಗೋಳಿಕ ಕ್ಷೇತ್ರದ ಅನುಗುಣವಾಗಿ ಉಳಿದ ತಾಲ್ಲೂಕುಗಳಿಗೆ ಸಮಾನಾಂತರವಾಗಿ ಸೂಕ್ತ ಪ್ರಾತಿನಿಧ್ಯ ನೀಡಿ ಮೇಲ್ದರ್ಜೆಗೇರಿಸುವುದು.

xiii) ಭೌಗೋಳಿಕವಾಗಿ ಉತ್ತರ ಹಾಗೂ ದಕ್ಷಿಣ ವಲಯಗಳ ಸಮತೋಲನ ಕಾಪಾಡುವ ಸಲುವಾಗಿ ರಸ್ತೆಗಳನ್ನು ಮೇಲ್ದರ್ಜೆಗೇರಿಸುವಾಗ ಉತ್ತರವಲಯಕ್ಕೆ ಸೂಕ್ತ ಪ್ರಾಧಾನ್ಯತೆ ನೀಡಿ ಪ್ರಸ್ತುತ ಇರುವ ಅಸಮಾನತೆ ಹೋಗಲಾಡಿಸುವುದು.

-6-

xiv) ರಸ್ತೆಯ ಭಾಗವನ್ನು ರಾಜ್ಯ ಹೆದ್ದಾರಿ ಅಥವ ಜಿಲ್ಲಾ ಮುಖ್ಯ ರಸ್ತೆಯೆಂದು ಘೋಷಿಸುವ ಮೊದಲು ಆರ್ಥಿಕ ಇಲಾಖೆಯನ್ನು ಸಂಪರ್ಕಿಸಿ ಪೂರ್ವಾನುಮತಿ ಹಾಗೂ ಅನುಮೋದನೆ ಪಡೆಯತಕ್ಕದ್ದು.

ಮೇಲಿನ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:PWD 973 FC-1/09 ದಿನಾಂಕ: 31.12.2009 ರಲ್ಲಿನ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

M. Devi prasad
(ಡಿ. ದೇವಿಪ್ರಸಾದ್) 21/04/1?
ಸರ್ಕಾರದ ಅಧೀನ ಕಾರ್ಯದರ್ಶಿ
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ(ಸಂಪರ್ಕ-1 ಮತ್ತು ಇ.ಡಿ.)

ಗೆ,

1) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ದಕ್ಷಿಣ), ಬೆಂಗಳೂರು.
2) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ಉತ್ತರ), ಧಾರವಾಡ.
3) ಉಪಕಾರ್ಯದರ್ಶಿಗಳು, [illegible], ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಬೆಂಗಳೂರು.
4) ಎಲ್ಲಾ ಅಧೀಕ್ಷಕ ಇಂಜಿನಿಯರ್‌ಗಳು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ.
5) ಎಲ್ಲಾ ಕಾರ್ಯಪಾಲಕ ಇಂಜಿನಿಯರ್‌ಗಳು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವಿಭಾಗ.
6) ಸಚಿವ ಸಂಪುಟ ಶಾಖೆ([illegible] 71/2010).
7) ಶಾಖಾ ರಕ್ಷಾ ಕಡತಕ್ಕೆ / ಹೆಚ್ಚುವರಿ ಪ್ರತಿ.

Unstd 628

34

U/S
09/03/2020

# ಕರ್ನಾಟಕ ಸರ್ಕಾರ

ಸಂಖ್ಯೆ: ಲೋಇ 68 ಸಿಐಎಸ್ 2020 (ಇ)

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:06.03.2020.

ಇಂದ:
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರುಗಳು ಮತ್ತು
ಒಳನಾಡು ಜಲಸಾರಿಗೆ ಇಲಾಖೆ,
ವಿಕಾಸ ಸೌಧ, ಬೆಂಗಳೂರು.

ಇವರಿಗೆ:
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭಾ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

**ವಿಷಯ:** ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಬಸವನಗೌಡ ದದ್ದಲ (ರಾಯಚೂರು ಗ್ರಾಮಾಂತರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 628 ಕ್ಕೆ ಉತ್ತರ ಒದಗಿಸುವ ಬಗ್ಗೆ.

**ಉಲ್ಲೇಖ:** ತಮ್ಮ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.628/2020, ದಿನಾಂಕ:26.02.2020.

------

ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಬಸವನಗೌಡ ದದ್ದಲ (ರಾಯಚೂರು ಗ್ರಾಮಾಂತರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 628 ಕ್ಕೆ ಉತ್ತರದ ಕನ್ನಡ ಭಾಷೆಯ 100 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

ಶಾಖಾಧಿಕಾರಿ,
ಲೋಕೋಪಯೋಗಿ, ಬಂದರುಗಳು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ-2)

**ಪ್ರತಿ:** ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಸಮನ್ವಯ)

ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 628 |
| ಸದಸ್ಯರ ಹೆಸರು | : | ಶ್ರೀ ಬಸವನಗೌಡ ದದ್ದಲ (ರಾಯಚೂರು ಗ್ರಾಮಾಂತರ) |
| ಉತ್ತರಿಸುವ ದಿನಾಂಕ | : | 09.03.2020. |
| ಉತ್ತರಿಸುವ ಸಚಿವರು | : | ಉಪಮುಖ್ಯಮಂತ್ರಿ<br>ಲೋಕೋಪಯೋಗಿ ಮತ್ತು<br>ಸಮಾಜ ಕಲ್ಯಾಣ ಇಲಾಖೆ |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಯಚೂರು ಗ್ರಾಮೀಣ ವಿಧಾನ ಸಭಾ ಕ್ಷೇತ್ರದ ಗ್ರಾಮೀಣ ರಸ್ತೆಗಳನ್ನು ಮೇಲ್ದರ್ಜೆಗೇರಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ | ಹೌದು |
| (ಆ) | ಹಾಗಿದ್ದಲ್ಲಿ, ಯಾವ ರಸ್ತೆಗಳನ್ನು ಮೇಲ್ದರ್ಜೇಗೇರಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ರಾಯಚೂರು ಗ್ರಾಮೀಣ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಗ್ರಾಮೀಣ ರಸ್ತೆಗಳನ್ನು ಮೇಲ್ದರ್ಜೆಗೇರಿಸುವ ಬಗ್ಗೆ ಸ್ವೀಕೃತವಾಗಿರುವ ಪ್ರಸ್ತಾವನೆಗಳ ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ.<br>ರಾಜ್ಯದಲ್ಲಿನ ರಸ್ತೆಗಳನ್ನು ಮೇಲ್ದರ್ಜೆಗೇರಿಸುವ / ಕೆಳದರ್ಜೆಗಿಳಿಸುವ ಪ್ರಸ್ತಾವನೆಗಳ ಕುರಿತು ರಚಿಸಲಾಗಿರುವ ಸಮಿತಿಯು ಸರ್ಕಾರದಲ್ಲಿ ಸ್ವೀಕೃತವಾಗಿರುವ ಪ್ರಸ್ತಾವನೆಗಳನ್ನು ಪರಿಶೀಲಿಸಿ, ಅಂತಿಮಗೊಳಿಸಿದ ನಂತರ ಆರ್ಥಿಕ ಇಲಾಖೆಯ ಅನುಮೋದನೆ ಪಡೆದು ಕ್ರಮ ವಹಿಸಲಾಗುತ್ತದೆ. |

ಕಡತ ಸಂಖ್ಯೆ: ಲೋಇ 68 ಸಿಐಎಸ್ 2020 (ಇ)

(ಗೋವಿಂದ.ಎಂ.ಕಾರಜೋಳ)
ಉಪಮುಖ್ಯಮಂತ್ರಿ
ಲೋಕೋಪಯೋಗಿ ಮತ್ತು
ಸಮಾಜ ಕಲ್ಯಾಣ ಇಲಾಖೆ

## ವಿಧಾನಸಭೆ ಚುಕ್ಕೆ ಗುರುತಿಲ್ಲದ / ಗುರುತಿನ ಪ್ರಶ್ನೆ ಸಂಖ್ಯೆ: 628ರ ಲಗತ್ತು ಅನುಬಂಧ

### ರಾಯಚೂರು ಗ್ರಾಮಾಂತರ ವಿಧಾನಸಭಾ ಕ್ಷೇತ್ರದ ಮೇಲ್ದರ್ಜೆಗೇರಿಸಲು ಪ್ರಸ್ತಾಪಿಸಿರುವ ಗ್ರಾಮೀಣ ರಸ್ತೆಗಳ ವಿವರ

| ಕ್ರ. ಸಂ. | ಜಿಲ್ಲೆ | ತಾಲ್ಲೂಕು | ಗ್ರಾಮೀಣ ರಸ್ತೆಯ ಹೆಸರು | ರಸ್ತೆ ಉದ್ದ (ಕಿ.ಮಿ.ಗಳಲ್ಲಿ) |
|---|---|---|---|---|
| 1 | 2 | 3 | 4 | 5 |
| 1 | ರಾಯಚೂರು | ರಾಯಚೂರು | ರಾಯಚೂರು ತಾಲ್ಲೂಕಿನ ಚೇಪನಬೆಂಚಿ ಮತ್ತು ಜಿ.ಹನುಮಾಪುರ ಮಾರ್ಗವಾಗಿ ರಾಷ್ಟ್ರೀಯ ಹೆದ್ದಾರಿ–167 ಶಕ್ತಿನಗರ ದಿಂದ ದೇವದುರ್ಗ ತಾಲ್ಲೂಕು ಗಡಿಯ ರಾಜ್ಯ ಹೆದ್ದಾರಿ–15 ರವರೆಗೆ | 16.56 |
| 2 | ರಾಯಚೂರು | ರಾಯಚೂರು | ರಾಯಚೂರು ತಾಲ್ಲೂಕಿನ ಇಡಪನೂರು. ಮಿರ್ಜಾಪುರ ಮಾರ್ಗವಾಗಿ ರಾಷ್ಟ್ರೀಯ ಹೆದ್ದಾರಿ–167 ಗುಂಜಹಳ್ಳಿಯಿಂದ ತಲಮಾರಿವರೆಗೆ | 18.26 |
| 3 | ರಾಯಚೂರು | ರಾಯಚೂರು | ಹೆಂಬರಾಳ, ಜೆ.ತಿಮ್ಮಾಪುರ ಮಾರ್ಗವಾರಿ ಜೆ.ಮಲ್ಲಾಪುರದಿಂದ ದೇವದುರ್ಗ ತಾಲ್ಲೂಕು ಗಡಿ (ಹೊನ್ನಟಗಿ) ವರೆಗೆ | 10.65 |
| 4 | ರಾಯಚೂರು | ರಾಯಚೂರು | ರಾಯಚೂರು ತಾಲ್ಲೂಕಿನ ದಿನ್ನಿ ಯಿಂದ ಕುರಡಿವರೆಗೆ (ಮಾನ್ವಿ ತಾಲ್ಲೂಕು ಗಡಿ) | 2.90 |
| 5 | ರಾಯಚೂರು | ರಾಯಚೂರು | ರಾಯಚೂರು ತಾಲ್ಲೂಕಿನ ತುಂಟಾಪುರ, ಕಮಲಾಪುರ, ಉಡಮಗಲ್, ಖಾನಾಪುರ ಮಾರ್ಗವಾಗಿ ರಾಜ್ಯ ಹೆದ್ದಾರಿ–127 (ಮುಧೋಳ–ಯರಗೇರಾ) ನಿಂದ ಮಲಮಗೇರಾ ದಿಂದ ಮರಚಟಾಳ ನಿಂದ ರಾಯಚೂರು–ದಿನ್ನಿ ಜಿ.ಮು.ರ. ಸೇರುವ ರಸ್ತೆ | 28.98 |
| 6 | ರಾಯಚೂರು | ರಾಯಚೂರು | ರಾಯಚೂರು ತಾಲ್ಲೂಕಿನ ರಾಷ್ಟ್ರೀಯ ಹೆದ್ದಾರಿ 167 ಗಿಲ್ಲೇಸುಗೂರು ನಿಂದ ತಲಮಾರಿ ವರೆಗೆ ಚಿಕ್ಕಮಂಚಾಳ. ಎನ್.ಮಲ್ಲಾಪುರ ಮಾರ್ಗದ ರಸ್ತೆ | 15.58 |
| 7 | ರಾಯಚೂರು | ರಾಯಚೂರು | ರಾಷ್ಟ್ರೀಯ ಹೆದ್ದಾರಿ 167 ಗುಂಜಹಳ್ಳಿಯಿಂದ ರಾಜ್ಯ ಹೆದ್ದಾರಿ 127ರವರೆಗ ಪೂಚಲದಿನ್ನಿ. ಮಲದೊಡ್ಡಿ, ಕೊತದೊಡ್ಡಿ ಮಾರ್ಗದ ರಸ್ತೆ | 11.37 |
| 8 | ರಾಯಚೂರು | ರಾಯಚೂರು | ರಾಯಚೂರು ತಾಲ್ಲೂಕಿನ ಆಶಾಪುರ ರಿಂದ ಗರಲದಿನ್ನಿ, ಮಾನ್ವಿ ತಾಲ್ಲೂಕು ಗಡಿಯವರೆಗೆ (ಕುರಡಿ) ಮರಚಟನಾಳ್ ಮಾರ್ಗದ ರಸ್ತೆ | 14.99 |
| 9 | ರಾಯಚೂರು | ರಾಯಚೂರು | ರಾಜ್ಯ ಹೆದ್ದಾರಿ–20 ರಿಂದ ರಾಷ್ಟ್ರೀಯ ಹೆದ್ದಾರಿ 167 ರವರೆಗೆ ಗೋನಾಳ. ಫತೇಪುರ. ಮರಚಡ್, ಕುಕನೂರು ಮಾರ್ಗದ ರಸ್ತೆ | 15.22 |
| 10 | ರಾಯಚೂರು | ಮಾನ್ವಿ | ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ ರಾಜ್ಯ ಹೆದ್ದಾರಿ–14 ಗೋರ್ಕಲ್ಲ ಕ್ರಾಸ್ ದಿನ್ನಿ, ಗೋರ್ಕಲ್ಲ. ಕುರಡಿ ಮಾರ್ಗದ ಕಿ.ಮೀ. 0.00 ರಿಂದ 15.00 ರವರೆಗಿನ ರಸ್ತೆ | 15.00 |

ಮು.ಪಿ.ನೋ

| 1 | 2 | 3 | 4 | 5 |
|---|---|---|---|---|
| 11 | ರಾಯಚೂರು | ಮಾಸ್ಕಿ | ರಾಯಚೂರು ಜಿಲ್ಲೆ ಮಾಸ್ಕಿ ತಾಲ್ಲೂಕಿನ ರಾಜ್ಯ ಹೆದ್ದಾರಿ-61 ಪೈಪ್ ಮರಚೇಡ್ ರಾಜಾಲಬಂಡ ವರೆಗೆ ಸಂಕೇಶ್ವರ ಮಾರ್ಗದ ಕಿ.ಮೀ. 0.00 ರಿಂದ 9.00 ರವರೆಗಿನ ರಸ್ತೆ | 9.00 |
| 12 | ರಾಯಚೂರು | ಮಾಸ್ಕಿ | ರಾಯಚೂರು ಜಿಲ್ಲೆ ಮಾಸ್ಕಿ ತಾಲ್ಲೂಕಿನ ರಾಜ್ಯ ಹೆದ್ದಾರಿ-61 ಮುಕೂರು-ಕುರಡಿ ವರೆಗೆ ಕಾಂಕ್ರೀಟ ಮಾರ್ಗದ ಕಿ.ಮೀ.0.00 ರಿಂದ 9.00 ರವರೆಗಿನ ರಸ್ತೆ | 9.00 |
| 13 | ರಾಯಚೂರು | ಮಾಸ್ಕಿ | ರಾಯಚೂರು ಜಿಲ್ಲೆ ಮಾಸ್ಕಿ ತಾಲ್ಲೂಕಿನ ಹಿಕಾಲ್ ನಿಂದ ಸಂಕೇಶ್ವರ ವರೆಗೆ ಕಿ.ಮೀ.0.00 ರಿಂದ 6.50 ವರೆಗಿನ ರಸ್ತೆ | 6.50 |
| | | | **ಒಟ್ಟು** | **174.01** |

4/3/2020

ಮುಖ್ಯ ಇಂಜಿನಿಯರ್,
ಯೋಜನೆ ಮತ್ತು ರಸ್ತೆಗಳ ಆಸ್ತಿ ನಿರ್ವಹಣಾ ಕೇಂದ್ರ,
ಲೋ.ಇಂ. & ಒ.ಜ.ಸಾ. ಇಲಾಖೆ, ಬೆಂಗಳೂರು